# ಸಿದ್ಧಗಂಗಾ

ಸಂಪುಟ–27. ಸಂಚಿಕೆ–7. ಜುಲೈ–1991.

ಧರ್ಮ ಜೀವನದ ಕಲೆಯನ್ನು ಕಲಿಸುತ್ತದೆ. ಮಾನವನ ಬದುಕು ಸೌಂದರ್ಯ ಪೂರ್ಣವಾಗಿ ನಳನಳಿಸಲು ಧರ್ಮಬೇಕು. ಧರ್ಮಬದ್ಧವಾದ ಮಾನವನ ಬದುಕಿನಿಂದಲೇ ಜಗತ್ತಿಗೆ ಅರ್ಥಪ್ರಾಪ್ತವಾಗುವುದು. ಧರ್ಮಸೀಮಿತ ವಾದುವಲ್ಲ. ಅದರ ವ್ಯಾಪ್ತಿ "ಜಗದಗಲ" ವಾದುದು. ಸ್ವಾರ್ಥಿಗಳ ಕೈಗೆ ಸಿಕ್ಕಿ ಧರ್ಮ ಸೀಮಿತವಾಯಿತು. ತಪ್ಪು ಕಲ್ಪನೆ ಬರುವಂತಾಯಿತು. ಶರಣರ ಜೀವನ ವನ್ನು ಅಧ್ಯಯನ ಮಾಡಿದಾಗ ಧರ್ಮದ ಅಂತರಾರ್ಥ ಮನದಟ್ಟಾಗುತ್ತದೆ. ಪ್ರಪಂಚವನ್ನು ತಿರಸ್ಕರಿಸದೆ, ಸಂಸಾರವನ್ನು ತ್ಯಜಿಸದೆ ಪರಿಶುದ್ಧ ಮಾರ್ಗದಲ್ಲಿ ನಡೆಯುವುದೇ "ಧರ್ಮ" ಎಂಬುದನ್ನು ಶರಣರ ಜೀವನ ತಿಳಿಸುತ್ತದೆ.

ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

## ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸಮಿತಿ, ಶ್ರೀ ಸಿದ್ಧಗಂಗಾ ಮಠ.

### ವಿನಮ್ರ ಮನವಿ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ ತ್ರಿವಿಧ ದಾಸೋಹಿಗಳೂ ಪರಮ ತಪೋಧನರೂ ಆದ ಶಿವಯೋಗಿ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ಧರ್ಮಪೀಠ ಸ್ವೀಕಾರ ಸಂಸ್ಮರಣಾರ್ಥವಾಗಿ ವಜ್ರಮಹೋತ್ಸವವನ್ನು ಆಚರಿಸುವ ಮಹಾ ಯೋಜನೆಯನ್ನು ಶ್ರೀಮಠದ ಭಕ್ತಾದಿಗಳು ಅಭಿಮಾನಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು, ವಿಶ್ವವಿಖ್ಯಾತ ನೇತ್ರದಾನಿ ಪದ್ಮಭೂಷಣ ಡಾ|| ಎಂ.ಸಿ. ಮೋದಿಯವರ ಗೌರವಾಧ್ಯಕ್ಷತೆಯೊಂದಿಗೆ, ಮಾನ್ಯ ಶ್ರೀ ಮುದ್ದಪ್ಪ ಐ.ಎ.ಎಸ್ (ನಿವೃತ್ತ)ರವರ ಕಾರ್ಯಾಧ್ಯಕ್ಷತೆಯಲ್ಲಿ ರೂಪಿಸಿಕೊಂಡು ಕಾರ್ಯೋನ್ಮುಖವಾಗಿದೆ.

ಇಪ್ಪತ್ತನೆಯ ಶತಮಾನದ ಅಪರೂಪದ ಮಹಾ ವಿಭೂತಿ ಪುರುಷರಾದ ಪರಮ ಪೂಜ್ಯ ಶ್ರೀ ಶ್ರೀಗಳವರು ಅರವತ್ತು ವರ್ಷಗಳಿಂದ ಸರ್ವಸಮಾಜದ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸುತ್ತಿರುವುದು ನಾಡಿನೆಲ್ಲ ಹೃದಯವಂತರಿಗೆ ತಿಳಿದಿರುವ ವಿಚಾರವಾಗಿದೆ ದೀನ ದಲಿತರ ಅಭಿವೃದ್ಧಿಗಾಗಿ ಪೂಜ್ಯ ಶ್ರೀ ಶ್ರೀಗಳವರು ಆಸಕ್ತಿವಹಿಸಿ ಗ್ರಾಮೀಣ ಬಂಧುಗಳ ಏಳ್ಗೆಯನ್ನು ಗಮನದಲ್ಲಿಟ್ಟುಕೊಂಡು ಸಲ್ಲಿಸುತ್ತ ಬಂದಿರುವ ನಿಷ್ಕಾಮ ಸೇವೆ ಅತ್ಯಂತ ಶ್ಲಾಘನೀಯವಾದುದು. " ಸೇವೆಯೇ ಶಿವಯೋಗ, ಕಾಯಕವೇ ಲಿಂಗಪೂಜೆ, ದಾಸೋಹವೇ ಮಾನವೀಯತೆ " ಎಂಬುದನ್ನು ಆಚರಿಸಿ ತೋರಿಸುತ್ತ ನಡೆದಿರುವ ಶಿವಯೋಗಿಗಳಿಗೆ ಕೃತಜ್ಞತಾ ಪೂರ್ವಕವಾಗಿ ಭಕ್ತಿ ನಮನಗಳನ್ನು ಸಲ್ಲಿಸಲು ಇದೊಂದು ಸುವರ್ಣಾವಕಾಶ.

ವಜ್ರಮಹೋತ್ಸವದ ಸಂಸ್ಮರಣಾರ್ಥಕವಾಗಿ ಶ್ರೀಮಠದಲ್ಲಿ ಅತ್ಯಂತ ವಿಶಾಲವಾದ 150 ಕೊಠಡಿಗಳನ್ನೊಳಗೊಂಡ ಬೃಹತ್ ವಿದ್ಯಾರ್ಥಿನಿಲಯವನ್ನು ಹಾಗೂ ಮೂರುಸಾವಿರ ಮಂದಿ ಕೂತು ಏಕಕಾಲದಲ್ಲಿ ಪ್ರಸಾದ ಸ್ವೀಕರಿಸುವಂಥ ಸುವಿಶಾಲ ಸುಸಜ್ಜಿತ ನೈರ್ಮಲ್ಯ ಪೂರ್ಣ ಪ್ರಸಾದನಿಲಯವನ್ನು ನಿರ್ಮಿಸುವ ಮತ್ತು ಶ್ರೀಮಠದ ಪರಿಸರ ಪರಿಶುದ್ಧವಾಗಿರುವಂತಹ ನೈರ್ಮಲ್ಯ ವ್ಯವಸ್ಥೆಯನ್ನು ರೂಪಿಸುವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

(3ನೇ ರಕ್ಷಾ ಪುಟ ನೋಡಿ)

# ಸಿದ್ಧಗಂಗಾ

ಸಂಪುಟ–27.     ಸಂಚಿಕೆ–7.     ಜುಲೈ – 1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಹಾಡು ಹಾಡಲೆ ಮನವೆ ಶ್ರೀ ಗುರು ಚರಣವ
ನೋಡು ನೋಡಲೆ ಕಣ್ಣೆ ಶ್ರೀರೂಪ। ಶಿವರೂಪ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾರೈಸಿ ಹಾರೈಸಿ ಅರಳಿಸಿದೆ ಮೊಗ್ಗುಗಳ
ಸಾರೈಸಿ ಸಲಹಿದೆ ಸಸಿಗಳ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ಎಂಥ ಪುಣ್ಯದತತ್ತ್ವ" ನಿತ್ಯ ನೀನಡೆದಿರುವೆ
ಸಂತ ಸಾಂತ್ವನ ಮಳೆಯ ಕರೆದಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

ಲೇಖನ ಲೇಖಕರು ಪುಟ



## ಶ್ರೀ ವಾಣಿ



### ಚಂಪಾವತಿ

ರಾಜ ಪ್ರತಾಪಸಿಂಹನ ಮಗಳು ಚಂಪಾವತಿ ಹತ್ತು ವರ್ಷದ ಬಾಲಕಿ. ಅವಳಿಗೊಬ್ಬ ತಮ್ಮ. ಪ್ರತಾಪಸಿಂಹ ಆತ್ಮ ವಿಶ್ವಾಸಗಳುಳ್ಳ ದೇಶಭಕ್ತ, ಮಹಾ ಪರಾಕ್ರಮಿ. ಅಕ್ಬರ್ ಚಕ್ರವರ್ತಿ ಪ್ರತಾಪಸಿಂಹನ ರಾಜ್ಯದ ಮೇಲೆ ದಂಡೆತ್ತಿ ಬಂದ. ಘನ ಘೋರ ಯುದ್ಧವಾಯಿತು. ಪ್ರತಾಪಸಿಂಹನ ಕೈ ದುರ್ಬಲವಾಗುತ್ತ ಬಂದಿತು. ಅರಮನೆಯನ್ನು ತ್ಯಜಿಸಿ ಅರಣ್ಯ ಸೇರಬೇಕಾಯಿತು. ಅಕ್ಬರ್ ಕೋಟೆಯನ್ನು ವಶಪಡಿಸಿಕೊಂಡು ಪ್ರತಾಪಸಿಂಹನ ಶೋಧಕ್ಕೆ ತೊಡಗಿದ. ಅರಣ್ಯ ಸೇರಿದ ಪ್ರತಾಪಸಿಂಹನ ಜೀವನ ದಿನ ದಿನಕ್ಕೆ ದುರ್ಭರವಾಗುತ್ತ ಬಂದಿತು. ದಿನ ನಿತ್ಯದ ಊಟಕ್ಕೆ ಕಾರ್ಪಣ್ಯ ಒದಗಿತು. ತನ್ನೆರಡು ಮಕ್ಕಳಿಗೆ ಒದಗಿದ ದುರ್ದೆಸೆಗಾಗಿ ಸಂಕಟಪಟ್ಟ. ಆದರೆ ಅಭಿಮಾನ ಶೂನ್ಯನಾಗಲಿಲ್ಲ. ಅಕ್ಬರನ ಆಕ್ರಮಣಕ್ಕೊಳಗಾದರೂ ಶರಣಾಗತನಾಗಲಾರೆ, ತನ್ನ ಮೈಯಲ್ಲಿ ಒಂದು ತೊಟ್ಟು ರಕ್ತಯಿರುವವರೆಗೂ ಶರಣಾಗತನಾಗುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ. ಪ್ರತಾಪಸಿಂಹನನ್ನು ಹುಡುಕುವುದಕ್ಕಾಗಿ ಬಂದ ಸನ್ಯಾಸಿ ವೇಷಧಾರಿ ಅಕ್ಬರನಿಗೇ ಮೇಲಿನಂತೆ ನೇರವಾಗಿ ತಿಳಿಸಿದ. ಸನ್ಯಾಸಿಯ ಸತ್ಕಾರಕ್ಕಾಗಿ ತನ್ನ ಬಳಿ ಏನೂ ಇಲ್ಲವಲ್ಲಾ ಎಂದು ಪರಿತಪಿಸುವಷ್ಟರಲ್ಲಿ ಮಗಳು ಚಂಪಾವತಿ ತಮಗೆಂದು ಇಟ್ಟುಕೊಂಡಿದ್ದ ರೊಟ್ಟಿಯನ್ನು ಕೊಟ್ಟು ಆತಿಥ್ಯ ಮಾಡುವುದಕ್ಕೆ ಸಹಾಯಕಳಾದಳು. ಅಷ್ಟರಲ್ಲಿ ಚಂಪಾವತಿಯ ತಮ್ಮ ಹಸಿದು ಬರುತ್ತಿರುವುದನ್ನು ಕಂಡು ಅವನನ್ನು ಸ್ವಲ್ಪದೂರ ಕರೆದು ಕೊಂಡು ಹೋಗಿ ಸಮಾಧಾನ ಪಡಿಸುವ ಪ್ರಯತ್ನದಲ್ಲಿ ಕಾಲುಜಾರಿ ಬಿದ್ದು ಬಿಟ್ಟಳು. ಪ್ರಾಣಾಂತಿಕವಾದ ಪೆಟ್ಟಾಯಿತು. ಮರಣ ಸನ್ನಿಹಿತವಾಯಿತು. ಆ ದೃಶ್ಯವನ್ನು ಕಂಡ ಪ್ರತಾಪಸಿಂಹ ತುಂಬ ಸಂಕಟದಿಂದ ಹೀಗೆ ಹೇಳತೊಡಗಿದ-ನನ್ನ ಮಕ್ಕಳ ಸಂಕಟ ಪರಿಹಾರಕ್ಕಾಗಿ ನನ್ನ ಪ್ರತಿಜ್ಞೆಯನ್ನು ಮುರಿದು ಅಕ್ಬರ್ ಚಕ್ರವರ್ತಿಗೆ ಶರಣಾಗುತ್ತೇನೆ ಎಂದ. ಅದನ್ನು ಕೇಳಿಸಿಕೊಂಡ ಚಂಪಾವತಿ ತಂದೆಯನ್ನು ಹತ್ತಿರ ಕರೆದಳು ಮೆಲ್ಲಗೆ ಮಾತಾಡಿದಳು. ತಂದೆ ಸಾಯುವ ಮೊದಲು ನಿಮ್ಮನ್ನು ಒಂದು ಮಾತು ಕೇಳುತ್ತೇನೆ. ವಚನ ಕೊಡಿ ನನಗಾಗಿ, ನಾನು ಸತ್ತನಂತರ ಸಮಾಧಿ ಮಾಡಿಸಿ ಎಂದು ಕೇಳುವುದಿಲ್ಲ. ಸ್ಮಾರಕವೇ

ರ್ಪಡಿಸಿ ಎಂದು ಬೇಡುವುದಿಲ್ಲ. ಆದರೆ ನನ್ನ ವೀರತಂದೆ ಕ್ಷತ್ರಿಯಕುಲ ದೀಪ ಪ್ರತಾಪಸಿಂಹನ ಮೈಯ್ಯಲ್ಲಿ ತೊಟ್ಟು ರಕ್ತವಿರುವವರೆಗೂ, ನಾನೇ ಸಾಯಲಿ ನನ್ನ ತಮ್ಮ ಸಾಯಲಿ, ನಮ್ಮ ವಂಶವೇ ಕೊನೆಯಾಗಲಿ, ಶತ್ರುವಿಗೆ ಶರಣಾಗತ ನಾಗುವುದಿಲ್ಲ ಎಂದು ವಚನಕೊಡಿ ಎಂದಳು. ಪ್ರತಾಪಸಿಂಹನ ಕಣ್ಣುಗಳಲ್ಲಿ ಧಾರಾಕಾರವಾಗಿ ಕಣ್ಣೀರು ಸುರಿಯಿತು. ಚಂಪಾವತಿಯನ್ನು ಬಾಚಿ ತಬ್ಬಿಕೊಂಡ. ವಚನಕೊಟ್ಟ ಕೈಮೇಲೆ ಕೈಯಿಟ್ ಪ್ರಮಾಣಮಾಡಿದ. ಚಂಪಾವತಿಯ ಪ್ರಾಣದೀಪ ನಂದಿಹೋಯಿತು. ಅದೆಲ್ಲವನ್ನು ಅಲ್ಲಿಯೇ ಇದ್ದು ನೋಡುತ್ತಿದ್ದ ಸಾಧು ವೇಷದ ಅಕ್ಬರ್ ತಕ್ಷಣವೇ ತನ್ನ ವೇಷಕಳಚಿ ಚಂಪಾವತಿಯನ್ನು, ಪ್ರತಾಪಸಿಂಹನನ್ನು ನೋಡುತ್ತ ನುಡಿದ " ಮೆಚ್ಚಿದೆ ಚಂಪಾವತಿ, ಮೆಚ್ಚಿದೆ ಪ್ರತಾಪಸಿಂಹ. ಹತ್ತು ವರ್ಷದ ಹೆಣ್ಣು-ಮಗುವಿನ ಬಾಯಲ್ಲಿ ಎಂಥ ಅಭಿಮಾನದ ಮಾತುಗಳು. ಅಭಿಮಾನಕ್ಕಿಂಥ ದೊಡ್ಡ ಸಂಪತ್ತು ಯಾವುದಿದೆ. ತೆಗೆದುಕೋ ನಿನ್ನ ರಾಜ್ಯ ನೀನು ಇಂದಿನಿಂದ ನನ್ನ ಶತ್ರುವಲ್ಲ, ಮಿತ್ರನಾದೆ. ಚಂಪಾವತಿಯಂಥ ಮಗಳ ತಂದೆಯಾಗಿ ಕೀರ್ತಿವಂತನಾದೆ " ಎಂದ. ಅಭಿಮಾನ ಜೀವನದ ಬಹು ದೊಡ್ಡ ಭಾಗ್ಯ. ಅಭಿಮಾನ್ಯ ಶೂನ್ಯರಾಗಿ ಜೀವಿಸುವುದು ಶ್ರೇಯಸ್ಕರವಲ್ಲ. ಭಾರತೀಯ ಪರಂಪರೆಯ ಪ್ರಜ್ಞೆಯುಳ್ಳವರಾಗಿ ಬಾಳಬೇಕು.

(21.6.91 ರಂದು ಮಾಗಡಿ ತಾ|| ರಂಗೇನಹಳ್ಳಿಯಲ್ಲಿ ಬಸವ ಜಯಂತಿ ಸಮಾರಂಭದಲ್ಲಿ ಮಾಡಿದ ಆಶೀರ್ವಚನದಿಂದ ಸಂಗ್ರಹ. )

## ಸಿದ್ಧಗಂಗಾ ಗುರುದೇವ

ಶರಣು ಸಿದ್ಧಗಂಗ ಗುರುದೇವ
ಸದ್ಗುರು ಪರಂಜ್ಯೋತಿಗೆ ನಮನ ||ಪ||

ಎಂಬತ್ತು ಮೂರು ವಸಂತ ಕಂಡ ಸುಜ್ಞಾನಿ
ಯೋಗಪುರುಷ ಓಂಕಾರ ಸ್ವರೂಪ ಮೂರ್ತಿ
ಶರಣರ ಗುರು ಶಿವಕುಮಾರ ಸ್ವಾಮ್ಗೀ
ಸ್ವಾಗತ – ಸುಸ್ವಾಗತ ಚೈತನ್ಯ ಚಿಲುಮೆಗೆ ||೧||

ಭಕ್ತರ ಕೋಟಿ ಹೃದಯಿಗಳ ಕೂಡುತ್ತಾ
ಗೆದ್ದ ಲೋಕಜ್ಞಾನಿ ದಿನಮಣಿಗೆ
ಶರಣ – ಶರಣೆಯರ ಶ್ರದ್ಧೆಯ ಚೇತನ
ತ್ರಿದಾಸೋಹ ಗುರುವಿಗೆ ಚರಣ ಕಮಲವು ||೨||

ವಿದ್ಯೆ – ದಾಸೋಹ – ಕೃಷಿ ಬಿತ್ತಿ
ಪೂರ್ವಕರ್ಮತರು ಮೀರಿರಲಾರದವರು
ಜಾತಿ – ಭೇದವಿಲ್ಲದೇ ಬಡವರ ಬಂಧುಗಳಾಗಿ ನೆಲೆಸಿರುವ
ನಿರ್ಮಲ ಮನದ ಸಿದ್ಧಗಂಗ ಗುರುವಿಗೆ ಶರಣು ||೩||

ಸಿದ್ದರಾಜ್ ಐವಾರ್. ಸಿದ್ಧಗಂಗಾ ಬಡಾವಣೆ, ತುಮಕೂರು.

# ಶ್ರೀ ಸಿದ್ಧಲಿಂಗೇಶ್ವರ ವಚನ



ಕತ್ತಲೆಯ ಪುರವ ಕಳ್ಳರು ಮುತ್ತಲು
ಪುರಪತಿ ಮುತ್ತಿಗೆಗೆ ಒಳಗಾದನು ನೋಡಾ ಅಯ್ಯ
ಅತ್ತಳ ಊರಿಂದ ಬೆಳಗು ಪಸರಿಸಲು, ಮುತ್ತಿಗೆತೆಗೆದೋಡಿತ್ತುಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಅಜ್ಞಾನದಿಂದ ತುಂಬಿದ ದೇಹ ಕತ್ತಲೆಯ ಪುರವಿದ್ದಂತೆ. ಅದನ್ನು ಅರಿಷಡ್ವರ್ಗವೆಂಬ (ಕಾಮ, ಕ್ರೋಧ, ಮೋಹ, ಮದ, ಲೋಭ, ಮತ್ಸರ) ಕಳ್ಳರು ಮುತ್ತಿದಾಗ ದೇಹದೊಡೆಯನಾದ ಜೀವನೂ ಸಹ ಮುತ್ತಿಗೆಗೆ ಒಳಗಾದನು. ಆ ಜೀವನಿಗೆ ಲಿಂಗತನುವಿನ ಸಂಬಂಧವಾದಾಗ ಸುಜ್ಞಾನವುಂಟಾಗಿ ಶಿವಸ್ಮರಣೆಯಿಂದಿರುವಾಗ ಆರಿಷಡ್ವರ್ಗಗಳ ಪರಿವರ್ತನೆ ಪರಿಹಾರವಾಗಿ ಷಡ್ವಿಧ ಭಕ್ತಿಸ್ವರೂಪಿಯಾಗಿ ಪರಿವರ್ತಿತವಾಯಿತು. ಅಂದರೆ ದೇಹಸಂಬಂಧಿಯಾದ ಆತ್ಮನು ಪೂರ್ವಾರ್ಜಿತ ಪುಣ್ಯಫಲದಿಂದ ಸುಜ್ಞಾನೋದಯವಾಗಿ, ಶ್ರೀ ಗುರು ದೇವನ ವೇದ, ಮಂತ್ರ, ಕ್ರಿಯಾ ಉಪದೇಶಗಳಿಂದ ಲಿಂಗಾಂಗ ಸಂಬಂಧಿಯಾಗಿ, ಷಟ್‌ಸ್ಥಲ ಜ್ಞಾನ ಕ್ರಿಯೆ ಸಮನ್ವಿತನಾಗಿ ಆಚರಿಸುತ್ತಿರುವಂತಾಯಿತು.

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ-572104**
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾಕ್ಷೇತ್ರ**

**ಚಂದಾ ವಿವರ**
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ. ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

ಶಾಲಾ ಕಾಲೇಜುಗಳ ಮುಂದೆ ಉದ್ದುದ್ದದ ಸಾಲುಗಳು. ಅರಳುವ ಮೊಗ್ಗುಗಳ ಉತ್ಸಾಹದ ದೃಶ್ಯ. ಪಾಲಕ ಪೋಷಕರ ಆತಂಕ. ಅಪೇಕ್ಷಿಸಿದ ಶಾಲೆಗಳ ಬಾಗಿಲು ತಟ್ಟುವ ಪ್ರಯತ್ನ, ಬಾಗಿಲು ತೆರೆದರೂ ನಿರೀಕ್ಷೆಗೆ ಮೀರಿದ ಶುಲ್ಕ. ಒಂದೊಂದು ಶಾಲೆಯಲ್ಲಿ ಒಂದೊಂದು ವಿಧಾನ. ಹೆತ್ತವರ ಸಂದರ್ಶನ ಮಕ್ಕಳ ಶಿಕ್ಷಣ ನೀಡುವಲ್ಲಿ ತಾಯಿ ತಂದೆಗಳ ಶೈಕ್ಷಣಿಕ ಅರ್ಹತೆಯ ಬಗ್ಗೆ ವಿಚಾರ ವಿನಿಮಯ 'ಇಂಗ್ಲಿಷ್ ಮೋಹವಂತೂ ನಮ್ಮ ದೇಶದಿಂದ ದೂರವಾಗಲಾರದು. ಬೆಳೆಯುವ ಎಳೆಯ ಚೇತನಗಳ ಮೇಲೆ ಹೊರಲಾರದಷ್ಟು ಪಠ್ಯ ಪುಸ್ತಕಗಳ ಹೊರೆ. ಶಿಕ್ಷಣ ತಜ್ಞರು ಎಷ್ಟು ಹೇಳಿದರೂ 'ಕಿವುಡು' ಪರಂಪರೆಯ ಹುಲುಸಾದ ಬೆಳಸು. ಮಾತೃಭಾಷೆಯ ಶಿಕ್ಷಣದ ಮಹತ್ವವನ್ನು ಯಾರು ಹೇಳಿದರೂ ಕೇಳದಷ್ಟು ದಪ್ಪ ಬುದ್ದಿ. "ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ" ಎಂದೇ ಜನ ಪಠಣ. ಮತ್ತೆ ಕಾಲೇಜುಗಳ ಕಥೆ ಇನ್ನೊಂದು ತೆರ. ಎಲ್ಲರೂ ವಿಜ್ಞಾನ ವಿಷಯಗಳನ್ನು ಓದಬೇಕೆಂಬ ಹಂಬಲ. ಹಂಬಲಕ್ಕೆ ಸೂಕ್ತ ಹಿನ್ನೆಲೆ, ಸಂಕಲ್ಪವಿರಬೇಕೆಂಬ ನಿರ್ಧಾರದ ಅಭಾವ. ಎಲ್ಲರೂ ಇಂಜಿನಿಯರ್, ಡಾಕ್ಟರುಗಳೇ ಆಗಬೇಕೆಂಬ ಕನಸು. ಪೋಷಕರಿಗಂತೂ ಅದು ಬೆನ್ನು ಹತ್ತಿದ ಬೇತಾಳ. ಎಷ್ಟೇ ಖರ್ಚಾದರೂ ತಮ್ಮ ಮಕ್ಕಳನ್ನು ಇಂಜಿನಿಯರುಗಳನಾಗಿ ಡಾಕ್ಟರುಗಳನ್ನಾಗಿ ಮಾಡಬೇಕೆಂಬ ಅಪೇಕ್ಷೆ. ಆದರೆ ಯಾರನ್ನೇ ಆಗಲಿ ಯಾವುದನ್ನೇ ಆಗಲಿ "ಮಾಡಬಾರದು; ಆಗಬೇಕು" ಎಂಬ ಸತ್ಯ ತಿಳಿಯದೇ ಹೋಗಿರುವುದೇ ಜೀವನದ ದೊಡ್ಡ ವ್ಯಂಗ್ಯ. "ಸ್ವಾಮಿ ನನ್ನ ಮಗನಿಗೆ ಪಿ.ಸಿ.ಎಂ.ಬಿಯನ್ನೇ ಕೊಡಿ. ಟ್ಯೂಷನ್ ಕೊಡಿಸಿಯಾದರೂ ಪಾಸ್ ಮಾಡಿಸುತ್ತೇನೆ. ಹಿಂದಿನ ಪರೀಕ್ಷೆಯಲ್ಲಿ ಜ್ವರಬಂದು ಕಡಿಮೆ ಮಾರ್ಕ್ಸ್ ತೆಗೆದಷ್ಟೆ. ತುಂಬ ಬುದ್ಧಿವಂತ. ದಯಮಾಡಿ ಸೀಟು ಕೊಡಲೇ ಬೇಕು" ಎಂಬ ಪಲ್ಲವಿ ಎಲ್ಲೆಲ್ಲೂ ಕೇಳಿಸುತ್ತಿರುವುದಾಗಿದೆ. ಆದರೆ ಹುಡುಗ ಗಳಿಸಿರುವ ಅಂಕಗಳು ಮಾತ್ರ ಮೂವತ್ತೈದರಿಂದ ನಲವತ್ತರ ಮೇಲಿಲ್ಲ. ಕಾಲೇಜಿನ ಪ್ರಿನ್ಸಿಪಾಲರ ಸಲಹೆಗಳಿಗೆ ಬೆಲೆಯಿಲ್ಲ. ಹಣ ಎಷ್ಟು ಕೇಳಿದರೂ ಕೊಡಲು ಸಿದ್ಧ. ಇನ್ನು ಕೆಲವರು – "ಅದೇನೋ ಪಿ ಸಿ.ಎಂ.ಬಿ ಯಂತೆ ಕೊಟ್ಟು ಬಿಡಿ ಅವನ ಜೊತೆಯವರು ಅದನ್ನೇ ಓದುತ್ತಾರಂತೆ. ಇವನೂ ಅದನ್ನೇ ಓದಲಿ" ಎನ್ನುತ್ತಾರೆ. ಮತ್ತೆ ಕೆಲವರು "ಅವನ ಅಣ್ಣ ಹೇಳಿದ್ದಾನೆ ಸ್ವಾಮಿ ಪಿ.ಸಿ.ಎಂ ಬಿ ಯೇ ಕೊಡಿ" ಎನ್ನುವುದುಂಟು. ಪ್ರಿನ್ಸಿಪಾಲರು ಅರ್ಹತೆಯ ಆಧಾರದ ಮೇಲೆ ನಿಯಮಾನುಸಾರ ಕೊಡಲಾಗುತ್ತದೆ ಎಂದರೆ, ಸ್ವಾಮಿ ನಿಮಗೆ ಯಾರಿಂದ ಕಾಗದ ತರಲಿ, ಫೋನ್ ಮಾಡಿಸಲಿ, ಯಾರನ್ನು ಕರೆತಂದು ಹೇಳಿಸಲಿ ಎಂಬೆಲ್ಲ ಮಾತುಗಳು. ನಮಗೆ ಅರ್ಥವಾಗಬೇಕು ನಮ್ಮ ಹುಡುಗನ ಸಾಮರ್ಥ್ಯ ಎಷ್ಟೆಂಬುದು. ನಾವು ಯೋಚಿಸಬೇಕು. ಕೇವಲ ಪಿ.ಸಿ.ಎಂ.ಬಿ ಯೊಂದೇ ಏಕೈಕ ವಿದ್ಯೆಯಲ್ಲ

ಎಂದು. ವಿಜ್ಞಾನ ನಮಗೆ ಬೇಕು. ಹಾಗೆಯೇ ಮಾನಸಿಕ ವಿಷಯಗಳೂ ಬೇಕಲ್ಲವೆ? ಕಲಿತವರೂ, ಕಲಿಯದವರೂ, ನಗರವಾಸಿಗಳೂ, ಗ್ರಾಮೀಣರೂ ಎಲ್ಲರೂ ಇಂದು ಏಕಮುಖಿಗಳಾಗುತ್ತಿದ್ದೇವೆ. ಶಿಕ್ಷಣ ಮನಷ್ಯನನ್ನು ರೂಪಿಸುವ ಮಹಾ ಮಣಿಹ, ಆದರೆ ಇಂದು ನಾವೆಲ್ಲ ಅಂದರೆ ಹೆತ್ತವರು, ಹೊತ್ತವರು, ಶಿಕ್ಷಕರು, ಸಮಾಜ, ಸರ್ಕಾರ, ಆಡಳಿತ ವ್ಯವಸ್ಥೆಯ ಮುಖ್ಯಸ್ಥರು ಕೇವಲ 'ಸಾಕ್ಷರಗಿಳಿ' ಗಳನ್ನು ಅಥವಾ "ಸಾಕ್ಷರ ರಾಕ್ಷಸ "ರನ್ನು ಬೆಳೆಸುವ ವ್ಯವಸಾಯದಲ್ಲಿಂದು ತೊಡಗಿದ್ದೇವೆ. ನಮ್ಮ ದೇಶದ ಸಂಸ್ಕೃತಿಗೆ ಅನುಗುಣವಾದ ಶಿಕ್ಷಣ ಯೋಜನೆಗಳು ಬರಲೇ ಇಲ್ಲ. ಮನುಷ್ಯರನ್ನು ರೂಪಿಸುವ ಶಿಕ್ಷಣ ಸಿದ್ಧವಾಗಲಿಲ್ಲ. ಸ್ವಾತಂತ್ರ್ಯ ಬಂದನಂತರ ನಾವು ಕಟ್ಟಿದ ಅಣೆಕಟ್ಟುಗಳೆಷ್ಟು? ಪಾರಂಭಿಸಿದ ಕೈಗಾರಿಕಾ ಸ್ಥಾವರಗಳೆಷ್ಟು? ಸಂಸ್ಥಾಪಿಸಿದ ವಿಶ್ವವಿದ್ಯಾಲಯಗಳೆಷ್ಟು ? ಆದರೆ ಆದದ್ದೇನು ದೇಶದ ಪ್ರಧಾನಿಗಳನ್ನೇ ಹತ್ಯೆ ಮಾಡುವಂತಹ ಬರ್ಬರ ಸಂಸ್ಕೃತಿಯನ್ನು "ಶೀಲವಂತ ಜನಾಂಗದ ನಿರ್ಮಾಣಕ್ಕೆ ನಾವು ಮಾಡಿದ ಪ್ರಯತ್ನಗಳೆಷ್ಟು? ಆತ್ಮಾವಲೋಕನ ಮಾಡಿ ಕೊಂಡಿದ್ದೇವೆಯೆ?" ಸಾಮಾನ್ಯವಾಗಿ ಒಂದು ದೇಶದ ಅಭಿವೃದ್ಧಿಯ ವಿಷಯ ಮಾತಾಡುವಾಗ (Per-capita income) ಸರಾಸರಿ ಆದಾಯವನ್ನು ಗಣಿಸುತ್ತೇವೆ. ಆದರೆ ಸರಾಸರಿ ಆದಾಯ ಆವರೆಗೆ ಸಾಧಿಸಿ ಪ್ರಗತಿಯ ಸೂಚಕ. ಜನರ ಸರಾಸರಿ ಶೀಲ, ಪ್ರಾಮಣಿಕತೆ, ಮುಂದಿನ ಪ್ರಗತಿಯ ಅಡಿಗಲ್ಲು. ಶೀಲ ಪ್ರಾಮಾಣಿಕತೆ ಬರಿಯ ಆದರ್ಶಗಳಲ್ಲ. ಆಧುನಿಕ ಸಮಾಜದ ಸಮರ್ಪಕ ನಿರ್ವಹಣೆಗೆ ಅತ್ಯಗತ್ಯವಾದ ಇಂಧನ. ಆದ್ದರಿಂದಲ್ಲೇ ರಾಜಾಜಿ ಹೇಳಿದ್ದು Not average income but average character is important. ಇದನ್ನು ಸ್ವಲ್ಪ ಮಾರ್ಪಡಿಸಿ ಹೀಗೆ ಹೇಳಬಹುದು, ಸರಾಸರಿ ಆದಾಯ ಮುಖ್ಯ, ಸರಾಸರಿ ಶೀಲ ಇನ್ನೂ ಮುಖ್ಯ". ಎಂಬ ಶ್ರೀ ಎಲ್. ಎಸ್. ಶೇಷಗಿರಿರಾಯರ ಮಾತಿನಲ್ಲಿ ಅರ್ಥವಿದೆ.

---

ಗುರು ಸಾಹಿತ್ಯರ ಕಾಣಬಹದು, ಲಿಂಗಸಾಹಿತ್ಯರ ಕಾಣಬಹುದು,
ಜಂಗಮಸಾಹಿತ್ಯರ ಕಾಣಬಹುದು, ಪ್ರಸಾದ ಸಾಹಿತ್ಯರ ಕಾಣಬಹುದು,
ಕೂಡಲ ಚನ್ನಸಂಗಯ್ಯನಲ್ಲಿ ಇಂದ್ರಿಯ ಸಾಹಿತ್ಯ ಬಸವಣ್ಣಂಗಲ್ಲದೇ
ಮತ್ತಾರಿಗೂ ಇಲ್ಲ.

ಚನ್ನಬಸವಣ್ಣ

## ಮುಂಜಾನೆಯ ಮನನ

ಸಿದ್ಧಯ್ಯಪುರಾಣಿಕ, ಶ್ರೀಗಿರಿ, 4/5ಎ, ಆಲಿಆಸ್ಕರ್ ರಸ್ತೆ, ಬೆಂಗಳೂರು-560052

ಪ್ಲೆಟೋನ ಪರಿಕಲ್ಪನೆಯ ತತ್ತ್ವಜ್ಞಾನಿ ಭೂಪತಿಯಾಗಿದ್ದ ಮಾರ್ಕಸ್ ಅರೇಲಿಯಸ್ ಮುಂಜಾನೆ ಮೊದಲು ಮನನಿಸ ಬೇಕಾದುದನ್ನು ಹೀಗೆ ಬಿತ್ತರಿಸಿದ್ದಾನೆ.

ಪ್ರಭಾತದಲ್ಲಿ ಮನದಲ್ಲಿದ ನೆನೆ ಸಂಜೆಯಾಗುವುದೂರೊಳಗಾಗಿ ಒಬ್ಬ ಕಿಲಾಡಿಯನ್ನೋ, ಕೃತ್ನಘನನ್ನೋ, ಅವಾಚ್ಯಶಬ್ದಗಳನ್ನಾಡುವವನನ್ನೋ, ದುಷ್ಟನನ್ನೋ, ಆಸೂಯಾಂಧನನ್ನೋ, ಸಮಾಜ ವಿರೋಧಿಯನ್ನೋ, ನೋಡುವುದು ನನ್ನಪಾಲಿಗಿದೆ. ಒಳಿತು ಕೆಡುಕಿನ ಬಗ್ಗೆ ಅವರಿಗೆ ತಿಳಿವಳಿಕೆಯಿಲ್ಲದಿರುವುದೇ ಆವರಲ್ಲಿ ಈ ವಿಷಯಗಳು ಉದ್ಭವಿಸಲು ಕಾರಣ. ಆದರೆ ನನಗೆ ಒಂದು ಸಕ್ರಿಯೆಯ ಸಹಾ ಸೌಂದರ್ಯವಾವುದೆಂಬುದೂ, ದುಷ್ಕ್ರಿಯೆಯ ಕುರೂಪವಾವುದೆಂಬುದೂ ಬೆಳೆದಿರುವುದರಿಂದಲೂ, ನನಗೆ ಕೇಡು ಬಯಸಿದವನು ನನ್ನ ರಕ್ತ ಸಂಬಂಧಿಯಲ್ಲದಿದ್ದರೂ ನಮ್ಮ ಮನಗಳು ಒಂದೇ ದೈವೀ ಮೂಲಗಳಿಂದ ಬಂದುವುಗಳಾದುದರಿಂದ ಸಮೀಪ ಸಂಬಂಧಿಗಳಾಗುವುದರಿಂದಲೂ ಅವನಾಗಲೀ ಇನ್ನಾರೇ ಆಗಲಿ ತನಗೆ ನಿಜವಾದ ಹಾನಿಯನ್ನು ಮಾಡಲಾರನೆಂಬ ನಂಬಿಕೆನನ್ನದಾಗಿದೆ. ಯಾಕೆಂದರೆ ಯಾರೂ, ನಾನು ನಡತೆ, ತಪಸ್ವಿಯಾಗುವಂತೆ ನನ್ನನ್ನು ಬಲಾತ್ಕರಿಸಲಾರರು; ಮತ್ತು ನನ್ನ ಪರಿವಾರಕ್ಕೆ, ನನ್ನ ಸ್ವಭಾವಕ್ಕೇ ಸೇರಿದ ಯಾರೊಬ್ಬರ ಬಗೆಗೂ ನನ್ನ ಹೃದಯದಲ್ಲಿ ದೋಷ ಹುಟ್ಟಲಾರದು; ಕ್ರೋಧ ಜನಿಸಲಾರದು. ಯಾಕೆಂದರೆ ನಮ್ಮೆಲ್ಲರ ನಿರ್ಮಾಣವಾಗಿರುವುದು ಪರಸ್ಪರ ಸಹಾಯಕ್ಕಾಗಿ-ಜೋಡಿ ಕಾಲುಗಳಂತೆ, ಕೈಗಳಂತೆ, ರೆಪ್ಪೆಗಳಂತೆ, ಹಲ್ಲಿನ ಸಾಲುಗಳಂತೆ, ಇವುಗಳು ಏನನ್ನು ತಿಳಿಸುತ್ತವೆ? ಹೋರಾಟ ಹೊಲ್ಲ, ವಿರೋಧ ಸಲ್ಲ-ಎಂಬುದನ್ನು ತಿಳಿಸುತ್ತವೆ.

ನಾವು ನಿತ್ಯ ಮುಂಜಾನೆ ಮನನ ಮಾಡಬೇಕಾದುದೆಲ್ಲವೂ ಮಾರ್ಕಸ್ ಆರೇಲಿಯಸ್‌ನ ಈ ಚಿಂತನೆಯಲ್ಲಿದೆ. ನಮ್ಮನ್ನು ನಿಷ್ಕಾರಣವಾಗಿ ಪೀಡಿಸುವವರೇ, ದ್ವೇಷಿಸುವವರೇ, ದೂಷಿಸುವವರೇ, ಮತ್ಸರಿಸುವವರೇ, ನಮಗೆ ಎದುರಾಗಲಿ ನಾವು ಮನಸ್ಸು ಮಾಡಿದರೆ ನಾವು ಅವರನ್ನು ಪೀಡಿಸದೆ, ದ್ವೇಷಿಸದೆ, ದೂಷಿಸದೆ, ಮತ್ಸರಿಸದೆ ಇರುವುದು ಸಾಧ್ಯ. ನಾವೀಗ ಕೆಳಮಟ್ಟಕ್ಕೆ ಇಳಿದು ಅವರಿಗೆ ಆಸ್ಪದ ಕೊಡದಿದ್ದರೆ ಅವರು ಎಷ್ಟು ಯತ್ನಿಸಿದರೂ ನಮ್ಮನ್ನು ದುರ್ವರ್ತನೆಯ ವಿಷವರ್ತುಳಕ್ಕೆ ಎಳೆಯಲಾರರು. ಮೇಲಾಗಿ, ಅವರು ನಮ್ಮ ರಕ್ತ ಸಂಬಂಧಿಗಳಾಗಿರದಿದ್ದರೂ ನಾವೆಲ್ಲರೂ ಒಂದೇ ದೈವೀ ಮೂಲದ ಬಂಧುಗಳು, ಒಂದೇ ಬಳಗದವರು, ಆದುದರಿಂದ ಅವರನ್ನು ದ್ವೇಷಿಸುವುದೆಂದರೆ, ಜೋಡಿ

ಕಾಲುಗಳು ಒಂದನ್ನೊಂದು ದ್ವೇಷಿಸಿದಂತೆ, ಜೋಡಿ ಕೈಗಳು ಒಂದನ್ನೊಂದು ವಿರೋಧಿಸಿದಂತೆ, ಅವಳಿ ರೆಪ್ಪೆಗಳು ಒಂದನ್ನೊಂದು ವಿರೋಧಿಸಿದಂತೆ ಹಲ್ಲಿನ ಎರಡು ಸಾಲು ಒಂದರ ವಿರುದ್ಧ ಇನ್ನೊಂದು ಸೆಟೆದು ನಿಂತಂತೆ. ಅವುಗಳಿರುವುದೇ ಪರಸ್ಪರ ಸಹಾಯಕ್ಕಾಗಿ, ಸಹಕಾರಕ್ಕಾಗಿ, ಸಹಜೀವನಕ್ಕಾಗಿ ಇದು ಮಾನವರಿಗೂ ಅನ್ವಯಿಸುವ ಸುವರ್ಣ ಸೂತ್ರ: ಇದಕ್ಕೆ ವಿರುದ್ಧವಾದುದು ವಿನಾಶ ಮಾತ್ರ: ಪರಸ್ಪರಂ ಭಾವಯಂತ್ರ: ಎಂಬುದೇ ಮಂತ್ರ.

ಮರಗಳಿಗೆ ಶಾಖೆಗಳು ನೂರಿರಬಹುದು; ಮರದ ಬೊಡ್ಡೆ ಒಂದೇ; ಮಾನವ ಮತಗಳು, ಅಭಿಮತಗಳು, ಭಾಷೆಗಳು, ವೇಷಗಳು ಅಸಂಖ್ಯವಾಗಿರಬಹುದು. ಆದರೆ ಎಲ್ಲರೂ ನೆಮ್ಮದಿಯಿಂದ ಬಾಳಲು ಸೂತ್ರವೊಂದೇ; ನಾವೆಲ್ಲರೂ ಒಂದೇ ಮೂಲದವರು, ಒಬ್ಬರೊಬ್ಬರಿಗೆ ನೆರವಾಗಿ, ಒಬ್ಬರೊಬ್ಬರ ಹಿತ ಸಾಧಿಸಲೆಂದು ಹುಟ್ಟಿದವರು ಎಂಬುದೇ ಆ ಸೂತ್ರ. ಮಾರ್ಕಸ್ ಅಲಿಯಸ್ ಹೇಳಿರುವಂತೆ ನಿತ್ಯ ಪ್ರಾತಃಕಾಲದಲ್ಲಿ ಈ ಸೂತ್ರದ ಮನನ ಮಾಡುತ್ತಿದ್ದರೆ ಯಾವ ದುಷ್ಟ ನಮ್ಮ ಮನಗಳನ್ನು ಬಗ್ಗಡಗೊಳಿಸಲಾರವು; ಯಾವ ದುಷ್ಟ ವ್ಯಕ್ತಿಗಳೂ ನಮ್ಮನ್ನು ಹೊಲ್ಲದ ನಡೆಗೆ ಒತ್ತಾಯಿಸಲಾರವು: ಸಲ್ಲದ ನುಡಿಗೆ ಬಲಾತ್ಕರಿಸಲಾರವು.

---

ತಿಳುವಳಿಕೆಯಿಲ್ಲದವನನ್ನು ಒಪ್ಪಿಸುವುದು ಸುಲಭ. ಹೆಚ್ಚು ತಿಳಿದವನನ್ನು ಒಪ್ಪಿಸುವುದು ಇನ್ನೂ ಸುಲಭ. ಆದರೆ ಸ್ವಲ್ಪ ತಿಳಿದುಕೊಂಡು ಅಹಂಕಾರ ಪಡುವ ಮನುಷ್ಯನನ್ನು ಬ್ರಹ್ಮನೂ ಕೂಡ ಒಪ್ಪಿಸಲು ಸಾಧ್ಯವಿಲ್ಲ.

– **ನೀತಿಶತಕ.**

ನೀರಿನ ಮೇಲೆ ದೋಣಿ ಇರಬಹುದು. ಆದರೆ ದೋಣಿಯೊಳಗೆ ನೀರಿರಬಾರದು. ಸಾಧಕ ಪ್ರಪಂಚದಲ್ಲಿರಬಹುದು. ಆದರೆ ಪ್ರಾಪಂಚಿಕತೆ ಸಾಧಕನಲ್ಲಿರಬಾರದು.

– **ರಾಮಕೃಷ್ಣ ಪರಮಹಂಸ.**

ವಿದ್ಯೆ, ಜ್ಞಾನ, ಅರಿವು ಮರಾಟಕ್ಕೆ ಸಿಗುವ ವಸ್ತುಗಳಲ್ಲ.
ನಿರಂತರ ಸಾಧನೆಯಿಂದ ಲಭಿಸುತ್ತವೆ.

- **ಅನುಭವಾಮೃತ.**



# ಮಾನವನ ಹುಟ್ಟು !

ಎ.ಬಿ. ಚನ್ನಬಸಪ್ಪ, ಬಸವ ಪ್ರಸಾದ, ಶಂಕರಮಠ, 2ನೆ ಕ್ರಾಸ್, ಕಿಲ್ಲೆ ಮೊಹಲ್ಲ, ಮೈಸೂರು-4

ಮಾನವ ಹುಟ್ಟುತ್ತಾನೆ. ಇದು ಅವನ ಕೈಯಲ್ಲಿ ಇಲ್ಲ, ಪ್ರಕೃತಿಯ ಕೈಯಲ್ಲಿ. ಪ್ರಕೃತಿಯು ಏಕೆ ಹುಟ್ಟಿಸಿತು? ಯಾವುದೊ ಒಂದು ಪ್ರಾಮುಖ್ಯವಾದ ಉದ್ದೇಶ ಇದ್ದೇ ಇರಬೇಕು. ಪ್ರಕೃತಿಯು(ದೇವರು=ಶಕ್ತಿ) ಸ್ಥಿರ! ಪೂರ್ವ ಆಲೋಚನೆಯಿಂದ ಮಾನವನನ್ನು ತನ್ನ ಮನೆಯೆಂಬ ವಿಶ್ವದಲ್ಲಿ ಕಳುಹಿಸಿರುವನು.

ಹಾಗಾದರೆ ಆತನು ಕಳಹಿಸಿದ ಉದ್ದೇಶವಾದರೂ ಏನು?

ವಿಸ್ತಾರವಾದ ಪ್ರಪಂಚ, ಇಲ್ಲಿ ಸಿಕ್ಕದುದು ಯಾವುದೊ ಇಲ್ಲ." ನಿನ್ನ ಬಾಯಿಗೆ ಮಣ್ಣು ಹಾಕ!" ಅಂತ ಕೋಪದಲ್ಲಿ ಕೆಲವರು ಹೇಳುವುದುಂಟು. ಅದನ್ನು ಸೇಡಿನ ಒರೆಗಲ್ಲಿನ ಮೇಲೆ ಒತ್ತಿ ಹಚ್ಚುವುದಲ್ಲ. ಧರ್ಮದ ಒರೆಗಲ್ಲಿನ ಮೇಲೆ ಒರೆ ಹಚ್ಚಬೇಕು. ಮಣ್ಣಿನಿಂದಲೇ ನಾವು ಬದುಕಿರುವುದು. ಮಣ್ಣಿನಲ್ಲಿ ಚಿನ್ನ ಹಾಕಿದರೂ ಚಿನ್ನ ಬೆಳೆಯುತ್ತೆ. ಇದರ ಭಾವಾರ್ಥ: ಕಬ್ಬುಹಾಕಿ, ಮೆಣಸಿಗೆಹಾಕಿ, ಕಡ್ಲೆಕಾಯಿಹಾಕಿ, ದ್ವಿದಳಧಾನ್ಯಹಾಕಿ. ಅಯಾ ಬೆಳಸಿಗೆ ಬೇಕಾದ ರಸ ವಸ್ತುಗಳನ್ನು ಕೊಡುತ್ತೆ. ಆದ್ದರಿಂದ ಆತನ ಬಾಯಿಗೆ ವಿಶೇಷಗಳನ್ನು ಹಾಕಿದಂತೆ ಅದಿಕ್ಕೇಕೆ ಕೋಪ.

ಭೂಮಿಯಲ್ಲಿ ನೀರು-ಇತರೆ ಲೋಹಗಳು. ಗಾಳಿಯಲ್ಲಿ ಪ್ರಾಣ ಉಳಿಸುವಂಥಾ ಬೆರಕೆಮಾಡಿ ಆತ ಬಿಡುವಗಾಳಿ, ಆಕಾಶದಲ್ಲಿ ಗಾಳಿ, ಬೆಳಕು, ಶಾಖ ಮೊದಲಾವುಗಳಿಗೆ ಸಹಾಯಕ. ಈ ಸಹಾಯದಿಂದ ಸಸ್ಯ ವರ್ಗ - ಪ್ರಾಣಿವರ್ಗಗಳು ಜನಿಸಿ, ಬೆಳೆದು, ತಿಂದು, ಆನಂದಗೊಂಡು ಕಣ್ಮರೆಯಾಗುತ್ತಾನೆ ಮಾನವ. ಆದರೆ ಆತನು ಹುಟ್ಟಿದ ಉದ್ದೇಶ?

ಲೌಕೀಕವಾಗಿ ಯಾವುದೊ ಕೆಲಸಕ್ಕೆ ಕಳುಹಿಸಿ ಕೊಟ್ಟಿದ್ದ ಒಡೆಯ"ಏನು ಮಾಡಿ ಬಂದೆ?, ಎಂದು ಪ್ರಶ್ನಿಸಿದರೆ, ಏನು ಹೇಳುವುದು? ಉ.ಮಾ.ಹೇ. ಎಂದು ಹೇಳುವುದೇ? ಎಂದೂ ಅಲ್ಲ ಹಾಗಾದರೆ:- ಹೀಗಲ್ಲವೆ ಆತನ ಮನೆಯಲ್ಲಿ(ವಿಶ್ವದಲ್ಲಿ) ನಡೆದು ಕೊಳ್ಳುವುದು. 'ಹುಟ್ಟು' ಅದಕ್ಕಾಗಿ ನನ್ನ ಪ್ರತಿಯೊಂದು ಹೆಜ್ಜೆಯು ಧರ್ಮ ಮಾರ್ಗದಲ್ಲಿ ಇಟ್ಟು ದಾರಿಯನ್ನು ಸಾಗಿಸಿಕೊಂಡು ನಿಮ್ಮಲ್ಲಿಗೆ ಬಂದಿದ್ದೇನೆ.

1) ಅನ್ಯರ ಸ್ವತ್ತನ್ನು ಅಪಹರಿಸಲಿಲ್ಲ.
2) ಅನ್ಯರನ್ನು ಅನ್ಯರನ್ನಾಗಿಕಾಣದೆ,ನನ್ನವರೆಂದು ಕಂಡೆನು.
3) ದಯೆಯೇ ಧರ್ಮದ ಮೂಲ. ಈ ತತ್ವವನ್ನೇ ಎನ್ನ ಉಸಿರಾಗಿಟ್ಟುಕೊಂಡು ದಿನಗಳನ್ನು ಕಳೆದೆನು.

4) ಆತನು ಯಾರೇ ಆಗಿರಲಿ ಬಚ್ಚಲ ರೊಚ್ಚಿನಲ್ಲಿ ಆಯತಪ್ಪಿ ಬಿದ್ದು ನರಳು ತ್ತಿರುವನು. ಆಗ ಆ ಜಾತಿ ಈ ಜಾತಿ ! ಕರಿಯುವ ಬಿಳಿಯುವ : ಬಡವ–ಬಲ್ಲಿದವ ಎಂಬ ಆಲೋಚನೆಗೆ ಎಡೆಗೊಡದೆ ಆತನನ್ನು ಆ ಬಚ್ಚಲ ರೊಚ್ಚಿನಿಂದ ಎತ್ತಿ, ಪ್ರಥಮ ಚಿಕಿತ್ಸೆ ಮಾಡಿ, ತಜ್ಞರ ಬಳಿಗೆ ಒಯ್ಯಬೇಕು. ಇದು ಬರವಣಿಗೆ ಅಲ್ಲ, ಮಾತಲ್ಲ, ಕೃತಿ; ಈ ರೀತಿ ಮಾಡಿ ಬಂದಿರುವೆನು ಎಂದು ಹೇಳುವ ಎದೆ ಇರಬೇಕು!

5) ತಾನು ಪ್ರಕೃತಿಯ ಸಮೀಪಕ್ಕೆ (ದೇವರ) ಹೋದರೂ ಆತನ ಹುಟ್ಟು ಧರ್ಮದ ಸ್ಥಂಭದ ಮೇಲೆ " ಸರ್ವೇಜನಾಃ ಸುಖಿನೋ ಭವಂತು' ಎಂಬ ಬಾವುಟವು ಫಟ-ಫಟನೆ ಹಾರಾಡುತ್ತಿರಬೇಕು ಆತನ ಹೆಸರು. ಬಸವಣ್ಣನ ಹುಟ್ಟು, ಮಹಾತ್ಮ ಗಾಂಧಿಯ ಹುಟ್ಟು, ಅಬ್ರಹಾಂ ಲಿಂಕನ್ನಿನ ಹುಟ್ಟು, ಶಿವಾಜಿಯ ಹುಟ್ಟು, ಬುದ್ಧನ ಹುಟ್ಟು ಮೊದಲಾದವರ ಹುಟ್ಟು ಸಾರ್ಥಕ! ನಾವು ಏಕೆ ಅದೇ ವಿಶ್ವದಲ್ಲಿ ಇದ್ದುಕೊಂಡು, ಆ ಹುಟ್ಟಿನವರಾಗಬಾರದು? ಪ್ರಯತ್ನ ಪಡುತ್ತೇವೆ. ಆಗುತ್ತೇವೆ !

---

ಜ್ಞಾನ ಮತ್ತು ಮಾನಸಿಕ ಶಿಸ್ತು ಶಿಕ್ಷಣದ ಗುರುತು.

ಅಜ್ಞಾನ, ಅನಕ್ಷರತೆ ದೇಶದ ಪ್ರಗತಿಗೆ ಮಾರಕ.

Democracy is the Progress of all.

* * * *

## ಮಾತು

ಪ್ರಾಣಿವರ್ಗದಲ್ಲಿ ಮಾನವ ಕಿರೀಟ ಪ್ರಾಯವಾಗಿದ್ದಾನೆ. ಆಲೋಚಿಸಿ ಮನಸ್ಸಿನ ಭಾವನೆಗಳನ್ನು ಪದ, ವಾಕ್ಯದ ಮೂಲಕ ವ್ಯಕ್ತಪಡಿಸುವ ವಿಶೇಷವಾದ ಶಕ್ತಿಯನ್ನು ಹೊಂದಿದ್ದಾನೆ. ಇದು ದೇವರು ನೀಡಿರುವ ಮಹತ್ತಾದ ಕೊಡುಗೆ. ಮಾತು ಮೌಲ್ಯವುಳ್ಳದ್ದಾಗಿರಬೇಕು. ನಮ್ಮ ಮಾತು ವಿದ್ಯೆ, ಜ್ಞಾನ, ವಿವೇಕ ಪ್ರದರ್ಶಿಸುತ್ತದೆ. ವ್ಯಕ್ತಿಯ ಸಂಸ್ಕೃತಿಯನ್ನು ನಿರೂಪಿಸುತ್ತದೆ. ಸದಾಕಾಲ ಸಂಪರ್ಕ ಮಧ್ಯವರ್ತಿಯಾಗಿ ನೆರವಾಗಿದೆ. ಸರ್ವರಿಗೂ ಹಿತವಾಗಿರುವಂತೆ ನುಡಿಯುತ್ತಿರಬೇಕು.

ಆದ್ದರಿಂದಲೇ ಮಾತಿನ ಪ್ರಾಮುಖ್ಯತೆಯನ್ನು ಅರಿತು ಮಹಾನುಭಾವ ಬಸವಣ್ಣನವರು ಮುತ್ತಿನ ಹಾರಕ್ಕೆ ಹೋಲಿಸಿ ಸಂಬಂಧ ಕಲ್ಪಿಸಿದ್ದಾರೆ. ಮುತ್ತು ಬಹು ಬೆಲೆಯುಳ್ಳದ್ದು. ಪ್ರತಿಯೊಬ್ಬರೂ ಅಪೇಕ್ಷಿಸಿ ಗಳಿಸಲು ಪ್ರಯತ್ನಿಸುತ್ತಾರೆ. ಅದರಂತೆ ಮಾತು ಪ್ರಿಯವಾಗಿ, ಮಧುರವಾಗಿ ಉತ್ತೇಜನ ನೀಡುವಂತಿರಬೇಕು. ಇಂಥಹ ಮಾತಿನ ಕಲೆಯನ್ನು ಅರಿತು ಪ್ರತಿಯೊಬ್ಬ ವ್ಯಕ್ತಿ ಚಿಂತನ ಮಾಡಬೇಕು.



## ಬಸವ ತತ್ತ್ವ ರತ್ನಾಕರ-5 (ವಚನ ಕಾವ್ಯ ಸುಧಾ ಸಾಗರ)

ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ, (ಬೆಳಗಾವಿ ಜಿಲ್ಲೆ.)

### ಶ್ರೀ ಗುರುವಿನ ಮಹಿಮೆ-(41)

ಕಂದ ॥ ಗುರು ಚರಣವೆ ವರ ಸದ್ಗತಿ ।
ಗುರು ಚರಣವೆ ಮತಿ ಗುರುಶಬ್ದಸ್ಪರ್ಶದೊಳಾ ॥
ಕರಣ ಶ್ರುತಿ ಪಾವನ ಸಕಳ ।
ಗುರುವೆ ಸರ್ವಮೆನಲಧಿಕ ಪೆರತೊಂದಿಲ್ಲಮ್ ॥

—" ಧರ್ಮಜ್ಞಕವಿ " ಕೃತ " ಶಿವಾನುಭಾವದರ್ಪಣ "
" (ಮೋಕ್ಷ ಚಿಂತಾಮಣಿ ಕಾವ್ಯ)

" ಶ್ರೀ ಗುರುವರನ ಪಾದಕಮಲಗಳೇ ಸದ್ಗತಿಗೆ ಕಾರಣ ನೋಡಾ.
ಶ್ರೀ ಗುರುವರನ ಚರಣ ಕಮಲಗಳೇ ಸುಮತಿ ಸುಬುದ್ಧಿ ವೃದ್ಧಿಗೆ ಕಾರಣ ನೋಡಾ.
ಶ್ರೀ ಗುರುವರನ ಶಬ್ದಸ್ಪರ್ಶದೊಳೇ ಕರಣೇಂದ್ರಿಯ ಶ್ರುತಿ ಪಾವನ ನೋಡಾ.
ಇಂತಪ್ಪ ಶ್ರೀ ಗುರುವು ಶಿಷ್ಯಂಗೆ ಸಕಳ ಶಿವಪದ-
ಮಾಗಿರಲು, ಶ್ರೀ ಗುರುವಿನಿಂದಧಿಕ ಮತ್ತೊಂದಿಲ್ಲ
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ."

### ಶ್ರೀ ಗುರುವಿನಾಧಿಕ್ಯ (42)

ಕಂದ ॥ ಶ್ರೀ ಗುರುವರ ಚಿಂತಾಮಣಿ ।
ಶ್ರೀ ಗುರುವರ ಶರಣರಂಗದೊಳ್ ಲಿಂಗಮುಖಮ್ ॥
ಶ್ರೀ ಗುರುವರ ಪರುಷದ ಕಣಿ ।
ಶ್ರೀ ಗುರುವರ-ಚರಣ ಮಾಳ್ಕೆಸಲೆ ಪಾವನವಮ್ ॥

" ಪರಮ ಶ್ರೀ ಗುರು ಚಿಂತಾರತ್ನವಾಗಿರ್ದ ನೋಡಾ.
ಪರಮ ಶ್ರೀ ಗುರು ಶಿವಶರಣರ ಲಿಂಗದೊಳು ಲಿಂಗ ಮುಖವಾಗಿರ್ದ ನೋಡಾ.
ಪರಮ ಶ್ರೀ ಗುರು ಪರುಷದ ಕಣಿಯಾಗಿಪ್ಪ ನೋಡಾ.
ಪರಮ ಶ್ರೀ ಗುರು ಚರಣವೇ ಸಕಳ ಸೃಷ್ಟಿ ಪವಿತ್ರಗೊಳಿಪುದಾಗಿ
ಪರಮ ಶ್ರೀ ಗುರುವು ಶ್ರೇಷ್ಠ ನಿರಂಜನ ಮೂರ್ತಿಯಾಗಿರ್ದ
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ."

### ಶ್ರೀ ಗುರು ಮಂತ್ರೋಪದೇಶ (43)

"ಅನಾದಿ ಗುರು ತನ್ನ ಭಾವ ಮನೋದೃಷ್ಟಿಗಳಿಂದ
ಚಿದ್ಘನ ಕಳೆಯನ್ನು ಹೊರತಂದು, ಶಿಷ್ಯನ ನೇತ್ರ ನೇತ್ರ ಕರಂಗಳಲ್ಲಿ
ಇಷ್ಟಲಿಂಗ ಕ್ರಿಯೋಪದೇಶದಿಂದ ಕರಿಗೊಳಿಸುವನಯ್ಯಾ
ಮಂತ್ರೋಪದೇಶದಿಂದ ಮನ-ಪ್ರಾಣಂಗಳಲ್ಲಿ ನೆಲೆಗೊಳಿಸುವನಯ್ಯಾ.
ಅಂತರಂಗ ಬಹಿರಂಗಗಳು ಭಯಂಗಗಳನ್ನು
ಲಿಂಗಮಯವಾಗಿಸಿ ಒಂದಾಗಿಸುವನಯ್ಯಾ
ಕ್ರಿಯಾ ಜ್ಞಾನಂಗಳನ್ನು ನಿಷ್ಪತ್ತಿಗೊಳಿಸಿ
ವಿಶ್ರಾಂತಿಗೊಳಿಸುವನಯ್ಯಾ."
ಅದನರುಹಲಾಗದು ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ,"

---

ಟೀ :–

### ಶಿವಾನುಭಾವ

ಶ್ಲೋಕ ॥ ಸದಾ ಹೃದಯದೊಳ್ ಶಾಂತಿ । ಮುದುತ್ಕರ್ಷಂ ದಯಾರಸವ್ ॥
ತದ್ವೈಕ ಪ್ರಣವಂ ಸೂಸ । ಲಿದೇ ಶಿವಾನುಭಾವವಯ್ ॥ 1 ॥

### ಲಿಂಗಧಾರಣೆಯ ಶ್ರೇಷ್ಠತೆ (44)

"ಪರಮ ಪರಿಪೂರ್ಣ ಶಾಂತಿ ಸುಖಾನುಭವಕ್ಕೆ
ಇಷ್ಟಲಿಂಗಧಾರಣೆಗಿಂತ ಮಿಗಿಲಾದ ಬೇರೊಂದು ಹೊಲಬಿಲ್ಲವಯ್ಯಾ !
ಏಕೆಂದರೆ, ನೆನಹಿನ ಬಯಕೆ ನೋಟ ಸುಖದಲ್ಲಿ ಅಡಗಿತ್ತು.
ನೋಡುವ ಬಯಕೆ ಮುಟ್ಟಿ ಪೂಜಿಸುವುದರಲ್ಲಿ ಅಡಗಿತ್ತು.
ಮುಟ್ಟಿ ಪೂಜಿಸುವ ಕ್ರಿಯಾಸಕ್ತಿಯು ಇಷ್ಟಲಿಂಗಧಾರಣದಲ್ಲಿ ಅಡಗಿತ್ತು.
ಎಂದಡೆ ತುಂಬಿ ಬಂದಿತ್ತು. ಲಿಂಗಧಾರಣವೇ ಪರಮೈಕ್ಯದ(ಪರಶಿವ ಪದ) ಶಿವ ಪಥ
ವೆನಿಸಿತ್ತು. ಇದು ಕಾರಣ ಲೋಕಕ್ಕೆ ಲಿಂಗಧಾರಣವೇ ಶ್ರೇಷ್ಠವೆನಿಸಿತ್ತು.
ಇಂತು "ಧರ್ಮಜ್ಞ" "ಕನ್ನಡ ಕವಿ ಕಾಳಿದಾಸ" ವಾಣಿ
ದೇವವಾಣಿ ! ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ !"

### ತ್ರಿವಿಧ ಪಾದೋದಕ-ಪ್ರಸಾದ (45)

"ಭಕ್ತದೇಹಿಕ ದೇವನೆಂದುದಾಗಿ ಸಚ್ಚಿದಾನಂದ ಸ್ವರೂಪನಾದ ಸದ್‌ಭಕ್ತ
(ಸತ್-ಚಿತ್-ಆನಂದ) ಗುರು-ಲಿಂಗ-ಜಂಗಮ ತ್ರಿವಿಧ ರೂಪಾಗಿರ್ದ ನೋಡಾ !
ಇಂತಪ್ಪ ಮಹಾನುಭಾವಿ ಪರಮ ಭಕ್ತನು ತನ್ನಿಂದ ತಾನೇ ಭಾವಿಸಿ,



ಗುರು-ಲಿಂಗ-ಜಂಗಮ ರೂಪ ತಾನೆಯಾಗಿ ಪಾದೋದಕ ಪ್ರಸಾದಮಂ
ಭಕ್ತಿಯಿಂ ಸ್ವೀಕರಿಸಿ, ಲೋಕ ಪೂಜ್ಯನಾಗಿರ್ದು ನಿತ್ಯ ನಿಜಾನಂದ
ಪರಮ ಸುಖಶಾಂತಿ ಸುಖದಲ್ಲಿಪ್ಪನಾಗಿ, ಇಂತಪ್ಪ ಶಿವಭಕ್ತಂಗೆ
ಅಧಿಕವಾದ ದೈವ ಭುವನತ್ರಯದೊಳುಂಟೇ ? ಹೇಳಾ,
ಶ್ರೀ ಶೈಲ ಮಲ್ಲಿಕಾರ್ಜುನ !"

### ಶ್ರೀ ಗುರುಬಸವ ಲಿಂಗಾಯ ನಮಃ
### ಮಹಾಮಂತ್ರ ಮಹಿಮೆ- 46)

"ಶ್ರೀ ಗುರುಬಸವಲಿಂಗಾಯ ನಮಃ, ಎಂಬೀ ಮೂಲಪ್ರಣವ ಮಂತ್ರವನು
ಪಠಿಸುವಂಗೆ ಗುರು ಉಂಟು; ಲಿಂಗ ಉಂಟು, ಜಂಗಮ ಉಂಟು,
ಲಿಂಗಾಂಗ ಸಾಮರಸ್ಯ ಸುಖ ಸಕಳ ಶಿವ ಪದವುಂಟು ನೋಡಾ !
ಇಂತಪ್ಪ ಮಹಾಮಹಿಮಾಸ್ಪದ ಮಾಗಿಪ್ಪ 'ಶ್ರೀ ಗುರುಬಸವಲಿಂಗಾಯನಮಃ'
ಮಹಾಮಂತ್ರವನು ಜಪಿಸದವಂಗೆ ಗುರುವಿಲ್ಲ; ಲಿಂಗವಿಲ್ಲ;
ಜಂಗಮವಿಲ್ಲವಾಗಿ ಅಂತಪ್ಪ ಅಜ್ಞಾನಿ ಭವಚಕ್ರದಲ್ಲಿ
ಬಪ್ಪುದು ತಪ್ಪದು ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ."

### ಆದಿ ಪುರಾತ ಶ್ರೀ ಬಸವಣ್ಣ (47)

"ನಮ್ಮ ಬಸವಣ್ಣ ಅನಾದಿ ಪುರಾತ ನೋಡಾ,
ನಮ್ಮ ಬಸವಣ್ಣ ಆದಿ ಪುರುಷ ನೋಡಾ,
ನಮ್ಮ ಬಸವಣ್ಣ ನಾದ ಪುರುಷ ವೋಡಾ.
ನಮ್ಮ ಬಸವಣ್ಣ ವೇದ ಪುರುಷ ನೋಡಾ.
ನಮ್ಮ ಬಸವಣ್ಣ ಅಗಮ್ಯ ಪುರುಷ ನೋಡಾ.
ನಮ್ಮ ಬಸವಣ್ಣ ಅಪ್ರಮಾಣ ಪುರುಷ ನೋಡಾ.
ನಮ್ಮ ಬಸವಣ್ಣ ಸರ್ವಜ್ಞ ಪುರುಷ ನೋಡಾ.
ನಮ್ಮ ಬಸವಣ್ಣ ಸಕಲ ಸೃಷ್ಟಿ ಉತ್ಪತ್ತಿ–ಸ್ಥಿತಿ
ಲಯಂಗಳಿಗೆ ಕಾರಣ ಕರ್ತನು ನೋಡಾ.
ಆದು ಕಾರಣ ಶ್ರೀ ಶೈಲಮಲ್ಲಿಕಾರ್ಜುನ ಲಿಂಗದಲ್ಲಿ
ಭಕ್ತಿವಡೆದ ಅನಂತ ಭಕ್ತರೆಲ್ಲ ಬಸವಣ್ಣ ಬಸವಣ್ಣ
ಬಸವಣ್ಣ ಎನುತ್ತ ಬದುಕಿದರಯಾ !"

**ಬಸವಣ್ಣನ ಮಹಾ ಘನತೆ (48)**

"ಶಂಭುಮೂರ್ತಿ ಬಸವಣ್ಣ, ನಿಮ್ಮ ಮುಂದಿರ್ದು
ಕಾಲಮಾಯೆಗಳೆರಡೂ ನಿಮ್ಮ ಕಾಣೆನೆನುತಿಹವಯ್ಯಾ.
ಧರ್ಮಮೂರ್ತಿ ಬಸವಣ್ಣ, ನಿಮ್ಮ ಮುಂದಿರ್ದು
ಸುರಾಸುರರು ನಿಮ್ಮ ಕಾಣೆನೆನುತಿಹರಯ್ಯಾ.
ಮಂತ್ರಮೂರ್ತಿ ಬಸವಣ್ಣ, ನಿಮ್ಮ ಮುಂದಿರ್ದು
ನಾದ ಮಂತ್ರಗಳು ಪಂಚ ಮಹಾವಾದ್ಯಂಗಳು ನಿಮ್ಮ ಕಾಣೆನೆನುತಿಹವಯ್ಯಾ.
ಜ್ಞಾನಮೂರ್ತಿ ಬಸವಣ್ಣ, ನಿಮ್ಮ ಮುಂದಿರ್ದು
ವೇದ ಶಾಸ್ತ್ರಾಗಮಂಗಳು ನಿಮ್ಮ ಕಾಣೆನೆನುತಿಹವಯ್ಯಾ.
ಷಟ್‌ಸ್ಥಲಮೂರ್ತಿ ಬಸವಣ್ಣ, ನಿಮ್ಮ ಮುಂದಿರ್ದು
ಅಂಗಾಲ ಕಣ್ಣವರು ಮೈಯೆಲ್ಲ ಕಣ್ಣವರು ನಂದಿವಾಹನರು
ಗಂಗೆವಾಳುರೆಲ್ಲ ನಿಮ್ಮ ಕಾಣೆನೆನುತಿಹರಯ್ಯಾ.
ಲಿಂಗಮೂರ್ತಿ ಬಸವಣ್ಣ, ನಿಮ್ಮಮುಂದಿರ್ದು
ಗೋಚರಿಸದ ಮನು ಮುನಿ ದೇವದಾನವ
ಮಾನವರೆಲ್ಲ ನಿಮ್ಮಕಾಣೆನೆನುತಿಹರಯ್ಯಾ.
ದೇವಗುರುಮೂರ್ತಿ ಬಸವಣ್ಣ, ಈ ಅಪ್ರಮಾಣ ಪುರುಷರೆಲ್ಲರೂ
ನಿಮ್ಮ ಮುಂದಿರ್ದು ನಿಮ್ಮ ಕಾಣೆನೆನುತಿಹರಯ್ಯಾ.
ಭಕ್ತ-ಜಂಗಮಮೂರ್ತಿ ಬಸವಣ್ಣ, ಇಂತೀ ಸರ್ವಪ್ರಕಾರದವರೆಲ್ಲರೂ
ನಿಮ್ಮ ಸಾಧಿಸದೆ ನಿಮ್ಮ ಅಂತುವ ಕಾಣದೆ ಹೋದರಯ್ಯಾ.
ಅದು ಕಾರಣ ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಲ್ಲಿ ಭಕ್ತಿದಳೆದ
ಭಕ್ತರೆಲ್ಲ ಬಸವಣ್ಣ ಬಸವಣ್ಣ ಬಸವಣ್ಣ ಎನ್ನುತ್ತ ಬದುಕಿದರಯ್ಯಾ."

**"ಪ್ರಣವ" ಸ್ವರೂಪ ಬಸವಣ್ಣ (49)**

"ಬಸವ, ಓಂಕಾರ' ಪ್ರಣವ' ಸ್ವರೂಪನಯ್ಯಾ!
'ಅ ಉ ಮ' (=ಓಂ) ಅಕ್ಷರತ್ರಯಂಗಳನುಚ್ಚರಿಸುವಲ್ಲಿ
ಆವಭಾವವುಂಟೋ ಅದೆ ಭಾವವು
ಬಸವ ನಾಮೋಚ್ಚರಣೆಯಲ್ಲಿಪ್ಪುದು ನೋಡಯ್ಯಾ!
ಇಂತೀ ಪ್ರಣವ ಸ್ವರೂಪನೆಂಬ ಸದ್ಭಾವನೆ, ಮೋಕ್ಷ ಕೀರ್ತಿ
ಸೃಷ್ಟಿಯ ಆದಿಯಿಂದಲೂ ನಮ್ಮೀ ಮಂತ್ರಮೂರ್ತಿ



ವಿಶ್ವವಿಭೂತಿ ಮಹಾತ್ಮ ಬಸವಣ್ಣನೊಬ್ಬಂಗೆ ಮಾತ್ರ ಸಂದಿತ್ತು ಕೇಳಾ !
ಇದು ಮಹಂತ ಶಿವಶರಣರಾ ' ಪವಿತ್ರ ಪ್ರಣವ'
ಭಾವನೆಯ ಪ್ರತೀಕವಲ್ತೆ? ಹೇಳಾ! ಇದಕ್ಕೆ ನೀವೆ ಪ್ರಮಾಣ
ಶ್ರೀ ಶೈಲ ಮಲ್ಲಿಕಾರ್ಜುನ.'

---

ಟೀ:- **ಆತ್ಮ ಪ್ರಕಾಶ.**

ಶ್ಲೋಕ|| ಲಿಂಗದಾ ದಿಟ್ಟಿಯಿಂದಂಗ । ಲಿಂಗಮಾಗಲ್ಕದಾತ್ಮಧೀ||
ಮಂಗಳ ಪ್ರಭೆಯಾ ವಿದ್ಯುತ್। ಸಂಗತಂ ನೀಡೆ ತೇಜಸಮ್ || ಪ.1. ||

**ದಿವ್ಯ ದೃಷ್ಟಿ**

ಚಂ.ಮಾ.ವೃ|| ಸುರುಚಿರ ಶಾಂತಿಪೂರಿತ ನಿಕೇತನದೊಳ್ ನಲಿದಿರ್ದು ನೈಜದಿವ್ ।
ನಿರುಪಮಮಾದ ನೀರವ ವಿಲಾಸ ನವೀನತೆಯಾತ್ಮ ಸೃಷ್ಟಿಯೊಳ್||
ಜರುಗುವ ಮೋಡಿಯಂ ತಿಳಿಯೆ ಯೋಗಿಲಲಾಮನೆ ದಿವ್ಯ ದೃಷ್ಟಿಯಿಮ್||
ಮರವೆಯ ಮಾನವಂಗಿಹ ರಹಸ್ಯಮ ನೋಳ್ಪಗೆ ಸಾಧ್ಯಮಾಗದಯ್||ಪ.2

**ಬಸವ ಮಂತ್ರಮೂರ್ತಿ (50)**

"ಬ, ಕಾರವೆ ಭವಹರ ಗುರುವೆನಿಸಿತ್ತು.
'ಸ' ಕಾರವೆ ಸಕಲ ಚೈತನ್ಯಾತ್ಮಕ ಲಿಂಗವೆನಿಸಿತ್ತು.
'ವ' ಕಾರವೆ ವಚಿಸುವುದಕ್ಕೆ ಕಾರಣವಾದ ಜಂಗಮವೆನಿಸಿತ್ತು.
ಇಂತೀ ಬಸವಾಕ್ಷರತ್ರಯ 'ಗುರು-ಲಿಂಗ-ಜಂಗಮ' ತ್ರಿವಿಧ
ರೂಪಾಂತ ಪರಶಿವ ಸ್ವರೂಪವೆನಿಸಿತ್ತು.
ಇದು ಕಾರಣ ಆನು ಬಸವಾ ಬಸವಾ-ಬಸವಾ ಎನ್ನುತ್ತ
ಬದುಕಿದೆ ಕಾಣಾ ಶ್ರೀ ಶೈಲ ಮಲ್ಲಿಕಾರ್ಜುನ"

**ಬಸವ ನಾಮವೆ ದಿವ್ಯ ಮಂತ್ರ (51)**

"ವಸುಧೆಯೊಳಗಸಮನಯನನ ರೂಪಿಯೆನಲು
ಬಸವ ನಾಮವೆ ದಿವ್ಯ ಮಂತ್ರವಾಗಿತ್ತು ನೋಡಾ.
'ಬ' ಎಂದೊಡೆ ನಾದ, 'ಸ' ಎಂದೊಡೆ ಬಿಂದು 'ವ' ಎಂದೊಡೆ ಕಲಾ
ಇಂತು ನಾದ-ಬಿಂದು-ಕಲಾತ್ಮ ಸ್ವರೂಪಿ ನಮ್ಮ ಬಸವಣ್ಣ ನೋಡಾ.
ಐಕ್ಯಸ್ಥಲ ಕಾಸಾರದಲ್ಲಿ ಹಂಸನಾಗಿ ವಿಹರಿಸಿದೊಡು
ಪರಮ ಗುರು ಬಸವಣ್ಣ ಭಕ್ತಿ ಭಂಡಾರಿ ನೋಡಾ.
ಬಸವಾ ಬಸವಾ ಎಂಬ ಮಹಾಮಂತ್ರ ಮೊಸೆದೆಸೆದು
ಜಗವೆಲ್ಲ ತುಂಬಿಕೊಂಡು 'ಓಂಕಾರ 'ನಾದಮಯವಾಗಿತ್ತು ನೋಡಾ.
ಬಸವಾ ಬಸವಾ ಎಂಬ ಪರಮ ಪವಿತ್ರ ಮಂತ್ರ
ಜಗದಸಕಲ ಜೀವರಾಶಿಯ ಹೃನ್ಮಂದಿರದಿ ಬೆಳಗಿ
'ಬಿಂದು' ಮಯವಾಗಿತ್ತು ನೋಡಾ.
ವಿಶ್ವೋದ್ಧಾರಣ ವಿಶ್ವಾತ್ಮವಿಕಾಸವಾಗಿ

'ಕಲಾ' ಮಯವಾಗಿ ಕಂಗೊಳಿಸಿತ್ತು ನೋಡಾ.
ಇಂತಪ್ಪ ಅನಾದಿಯಿಂದಾದಿಗೆ ಆದಿಯಿಂದನಾದಿಗೆ,
ಸ್ವಲೀಲಾ ವಿಲಾಸ ಲೋಲ ಚಿತ್ತನಾಗಿ,
ವಿಹರಿಸುತ್ತಿಪ್ಪ ಮಂತ್ರ ಸ್ವರೂಪ ನಮ್ಮ ಸಂಗನ ಬಸವಣ್ಣನ
ಶ್ರೀ ಪಾದಕ್ಕೆ ನಮೋ ನಮೋ ಎಂದು
ಬ್ರಹ್ಮಾಂಡಗಳೆಲ್ಲ ಬದುಕಿಪ್ಪವು
ಕಾಣಾ, ಶ್ರೀ ಶೈಲಮಲ್ಲಿ ಕಾರ್ಜುನ."

ದೈವ ನಿರೂಪಣೆ (ಚಂ.ಮಾ-ವೃತ್ತ-ಉ-ಮಾ-ವೃತ್ತ)

ಸಲು } ವನ ಬಿಟ್ಟೊಡೊಂದದುರೆ ಜೀವನವುಂ ಬರಿದುಃಖದಾಯಕವಮ್।
ದೇ }
ಕಳ } ವಿನ ಭಾವದಿಂ ಬೆರೆಯೆ ಮೇಣ್ ಭ್ರಮೆ ಭೀತಿಯೊಳಂ ನಿರಂತರಮ್
ಸಾ }
ತಿಳಿ } ವನ ಮುಕ್ತಿಗಂ ತನುವಿದಂ ಸರುವಂ ಶಿವಲಿಂಗಕರ್ಪಿಸಲ್ ।
ಜೀ }
ಒಲಿ } ವನ ದಿಟ್ಟಿಯಿಂ ಪಡೆವುಕಂ ಸುಧೆ ಶಾಂತಿ ವಿಲಾಸಮಾ ಸುಖಮ್ ॥8॥
ಪಾ }

---

ಟೀ:–

## ಸದ್ಧರ್ಮ ದೀಪಿಕೆ.

ಶ್ಲೋಕ॥ ಮಾನವಂಗಾತ್ಮತೇಜಸ್ಸಂ। ಸಾನಂದಮುಂ ಸುಶಾಂತಿಯುಮ್ ॥
ಜ್ಞಾನಾನು ಭಾವಮುಂ ಧರ್ಮ। ಭಾನುವೀಗೆ ರಹಸ್ಯದೊಳ್ ॥1॥

### ಈಶ ಪ್ರಭಾವ

ಮ.ವಿ.ವೃ! ಶಿವತಾನೇ ಜಗಮಾಳ್ಪವಂ ಮರಳಿ ಸರ್ವಂ ಶೂನ್ಯಗೆಯ್ವಾತನುಮ್ ।
ನವ ಲೀಲಾಂಬುಧಿಯೊಳ್ ಮಹಾರಚನೆಯಾ ಕಾರ್ಯ ಶ್ರುತಾ ರಕ್ಷಣಾಮ್॥
ತವ ಪೂರ್ಣಂ ಮೆರೆವಾ ರಹಸ್ಯಮಿದ ಪೇಳಲ್ ಸಾರ ವೇದಾಂತಮೇ ।
ವಿವಶಪ್ರಾಯಮದಾಗೆ ದಿವ್ಯಮತುಳಂ ಭ್ರಾಜಿಷ್ಣುನೀಶಂ ಶ್ರಿತಮ್ ॥2॥

### ಧರ್ಮಧ್ವಜ.

ಕಂದ॥ ದೇವಗೆ ಮನುಜಗೆ ಮಧ್ಯದಿ।
ತೀವಿದ ಅಂತರವೆ ಧರ್ಮವೆನಿಸಿರೆ ನಿರುತಮ್॥
ಸಾವಿರ ಯುಗಗಳಳಿದೊಡಂ
ಭೂವಿನುತಂ ನೆರೆಮೆರೆದಮರಧ್ವಜ ರೂಪಮ್॥3॥

### ಶಿವ ಪದರತ್ನ

ಕಂದ॥ ನುಡಿಯಲಿ ಸತ್ಯವ ಬಳಸುತೆ
ನಡೆಯುತನವರತ ಸದಾಚರಣೆಯಿಂ ಭಕ್ತಮ್॥
ಪಿಡಿದಿಹ ಬಕುತಿಯ ಪಥದಿಂ!
ಪಡೆಯಲ್ ಮುಕುತಿಯ ಮಹಂತ ಶಿವಪದ ರತ್ನಮ್ ॥24॥

ಸಿದ್ಧಗಂಗಾ

# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್. ಎಸ್. ನರಸಿಂಹ ಜೀಯರ್, ಶ್ರೀ ಬಸವೇಶ್ವರ ಇಂಗ್ಲೀಷ್ ಸ್ಕೂಲ್, ತುಮಕೂರು-2.

ವಿಜ್ಞಾನದ ಬೆಳವಣಿಗೆಯು ವಿಶ್ವದ ಜನತೆಗೆ ಒಂದು ವರದಾನವಾಗಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ ಮಾನವನ ಸುಖ ಸಂಪತ್ತುಗಳಿಗೆ ಕಾರಣವಾದ ಈ ವಿಜ್ಞಾನದ ಮತ್ತೊಂದು ಮುಖವನ್ನು ಈಗ ನೋಡೋಣ.

ಅನೇಕ ವಿಖ್ಯಾತ ದಾರ್ಶನಿಕರು, ಮನೋವಿಜ್ಞಾನಿಗಳು, ಸಮಾಜ ಸುಧಾರಕರೂ ಅಲ್ಲದೆ ಸ್ವತಃ ವಿಜ್ಞಾನಿಗಳೂ ಸಹ ವಿಜ್ಞಾನದ ಬೆಳವಣಿಗೆಯಿಂದ ಮಾನವನು ತನ್ನ ಮೌಲ್ಯಗಳನ್ನು ಕಳೆದುಕೊಳ್ಳುತ್ತಾ ಬಂದಿದ್ದಾನೆ. ಅಲ್ಲದೆ ತನ್ನ ವಿನಾಶ ಅಂಚಿಗೆ ಬರುತ್ತಾ ಇದ್ದಾನೆ ಎಂದೂ ಸಹ ದೂರುತ್ತಿದ್ದಾರೆ. ವಾಸ್ತವವಾಗಿ ಇವರ ಅಭಿಪ್ರಾಯವನ್ನು ತುಲಾತ್ಮಕ ದೃಷ್ಟಿಯಿಂದ ನೋಡಿದಾಗ ಈ ವಾದದಲ್ಲಿ ಹುರುಳಿಲ್ಲದೆ ಇಲ್ಲ. ಡಾ|| ಸಾಮ್ಯುಯಲ್ ಸ್ಯಾಂಡ್‌ವಿಸ್ ಎಂಬ ಮನೋವಿಜ್ಞಾನಿ ಈ ರೀತಿ ಹೇಳಿದ್ದಾನೆ. “All the hopes raised by science about building a better world order” have proved dupes.” ಎಂದಿದ್ದಾನೆ. ಭೌತಶಾಸ್ತ್ರ ಪ್ರೊ|| ಫಿಲಿಪ್ ಪ್ರ್ಯಾಂಕ್ ಎಂಬುವರು “Despite these benefits (from Science) mankind has not become happier and is facing to day dangers of which have their source in these very achievements.” ಎಂದು ಮಾರ್ಮಿಕವಾಗಿ ತಿಳಿಸಿದ್ದಾರೆ.

ವಿಜ್ಞಾನದ ಆವಿಷ್ಕಾರದಿಂದ ತಿಳಿದ ತತ್ವಗಳನ್ನು ತತ್ವಜ್ಞಾನದಲ್ಲಿ ಬಳಸಿಕೊಂಡು ಮಾನವನು ತನ್ನ ನಾಶಕ್ಕೇ ಈಗ ಸಿದ್ಧವಾಗಿದ್ದಾನೆಂದ ಮೇಲೆ ಮೌಲ್ಯಗಳಿಗೆ ಬೆಲೆ ಎಲ್ಲಿದೆ? ಇದು ವಿಜ್ಞಾನದ ತಪ್ಪಲ್ಲ. ಅದನ್ನು ಉಪಯೋಗಿಸಿಕೊಳ್ಳುವ ನಮ್ಮದೇ ತಪ್ಪುದಾರಿಯಾಗಿದೆ ಮಾನವತ್ವದಿಂದ ದೈವತ್ವಕ್ಕೆ ಏರಲು ಪ್ರಯತ್ನಿಸಬೇಕಾದ ಮಾನವ ಮೌಲ್ಯರಹಿತನಾಗಿ ದಾನವತ್ವಕ್ಕೆ ಹೋಗುತ್ತಿದ್ದಾನೆ. ಇದನ್ನರಿತ ಡಾ|| ಐನ್‌ಸ್ಟೀನ್‌ರವರು ಬಹು ಹಿಂದೆಯೇ ಈ ರೀತಿ ನುಡಿದಿದ್ದಾರೆ. “In the event of a third world war, The weapens of destructions will leave nothing of the old, neither culture nor harmony, witn the result that the fews who will have survived or escaped will have to defend themselves in the fourth world war with crude weapons of stone, bows and arrows”. ವಿಜ್ಞಾನಿಯ ಈ



ಹೇಳಿಕೆಯಿಂದ, ನಮ್ಮ ವಿಜ್ಞಾನದ ಬೆಳವಣಿಗೆಯಿಂದ ತಯಾರಿಸಲ್ಪಟ್ಟ ಮಾರಕಾಸ್ತ್ರಗಳ ಪರಿಣಾಮು ಯಾವ ರೀತಿಯಾಗ ಬಲ್ಲದು ಎಂಬುದನ್ನು ನಾವೆಲ್ಲಾ ತೆರೆದ ಮನಸ್ಸಿನಿಂದ ನೋಡಬೇಕಾಗಿದೆ.

ವಿಜ್ಞಾನದ ಬೆಳವಣಿಗೆಯಿಂದ ಮೌಲ್ಯಗಳು ನಾಶವಾದ ಬಗ್ಗೆ ಹಾಗೂ ಭೌತಿಕವಾದ ಹೆಚ್ಚಾದ ಬಗ್ಗೆ ಕಾರಣವನ್ನು ಸ್ವತಃ ವಿಜ್ಞಾನಿಗಳೇ ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ.

“The overwhelming progress of science, its conquest of space and time, sound and light making his life materially rich and physically happy developed mechanistic faith and made man less significant than machine. This made him more insensitive to finer instincts and impulses in his nature which constitute main springs humanism. This growth of insensitiveness developed the anti—vedic view of life of the ancient “Charvaks” As a result altruism, charity self-les$ love, spirit of self sacrifice and allied finer qualities and values of life lost their place of importance in man's View. “In their place egotism, selfishness,, opportunism and acquisitiveness became the hall-mark of “wise livir g”

ಈ ಹೇಳಿಕೆಯನ್ನು ಪರಾಮರ್ಶಿಸಿದಾಗ ವಿಜ್ಞಾನಿಗಳ ಅಭಿಪ್ರಾಯವನ್ನು ನಾವೆಲ್ಲರೂ ಒಪ್ಪಲೇಬೇಕಾಗಿದೆ. ನಮ್ಮ ರಾಷ್ಟ್ರಾಧ್ಯಕ್ಷರಾಗಿದ್ದ ಹಾಗೂ ವಿಶ್ವದ ಪ್ರಸಿದ್ಧ ತತ್ವಜ್ಞಾನಿಗಳಾಗಿದ್ದ ಡಾ|| ಸರ್ವಪಲ್ಲಿ ರಾಧಾಕೃಷ್ಣರವರು ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾ “The modren man, intoxicated by the triumph of $cience has repudiated existence of God” ಎಂದು ಹೇಳಿ ವಿಜ್ಞಾನದ ಬೆಳವಣಿಗೆ ನಮ್ಮ ಸಮಾಜದಲ್ಲಿದ್ದ ಒಳ್ಳೆಯತನವನ್ನು ಕಡಿಮೆ ಮಾಡಿದೆ ಎಂದು ತಿಳಿಸಿದ್ದಾರೆ.

1975 ನೆಯ ಇಸವಿಯಲ್ಲಿ ದೆಹಲಿಯಲ್ಲಿ ನಡೆದ 62 ನೆಯ ವಿಜ್ಞಾನ ಕಾಂಗ್ರೆಸ್‌ನಲ್ಲಿ ಮಂಡಿಸಿದ ಪ್ರಬಂಧದಲ್ಲಿಯೂ ಮೇಲ್ಕಂಡ ಅಭಿಪ್ರಾಯವನ್ನು ಕಾಣಬಹುದು. “Indians in the course of 25 years after Independence, had become less kind, honest, Virtuous, Patriotic

spiritual and artistic and simple, but also more secular, cruel, dishonest, corrupt, traitorous materialistic, ferocious and radical. This erosion of character has entered deep in to our social and national life as well." ಇದು ಅಕ್ಷರಶಃ ಸತ್ಯವಾದ ಅಂಶವೆಂಬುದು ಎಲ್ಲರಿಗೂ ಈಗಾಗಲೇ ಮನಗಂಡಿದೆ.

ಇದಕ್ಕೆಲ್ಲಾ ವಿಜ್ಞಾನದಿಂದ ಮಾನವ ಪಡೆದ ಅನುಕೂಲಗಳೇ ಕಾರಣವೆಂದು H.G. Wells ರವರು ಮಾರ್ಮಿಕವಾಗಿ ಈ ರೀತಿ ತಿಳಿಸಿದ್ದಾರೆ "If the dangers, confusious and disasters that crowd upon man in these days are enormous beyond any experience of the past It is because, science has brought such powers as he never had before."

ಹೆಸರಾಂತ ವಿಜ್ಞಾನಿಗಳಾದ ಡಾ॥ ಎ. ಕೆ. ಗಂಗೂಲಿ, ಡಾ॥ ಎಸ್. ಮಹಾಪಾತ್ರ ಮುತ್ತಿತರ ವಿಜ್ಞಾನಿಗಳು ಈ ಬಗ್ಗೆ ಚಿಂತನೆ ಮಾಡಿ ಕಾರಣವನ್ನೂ ಊಹಿಸಿದ್ದಾರೆ.

In short, Science by ignoring the inner "being" of man has made lose the precious traditional values of life, without making any provision to create new ones suited to the present age of reason and rationality."

ಇಂದಿನ ಸನ್ನಿವೇಶವನ್ನು ಕೂಲಂಕುಷವಾಗಿ ಯಾವ ದಾಕ್ಷಿಣ್ಯ ಮನೋಭಾವವೂ ಇಲ್ಲದೆ ವಿಮರ್ಶಿಸಿದಾಗ ಎಂದಿಗಿಂತ ಇಂದು ಆಧ್ಯಾತ್ಮ ಶಿಕ್ಷಣ ಅತ್ಯಾವಶ್ಯಕ ಎಂಬ ಭಾವನೆ ಎಲ್ಲರಲ್ಲಿಯೂ ಮೂಡುವುದು ಸಹಜವಾಗಿಯೇ ಇದೆ.

---

ನಾವು ಮಾತಾಡಬಾರದು, ನಮ್ಮ ಕೆಲಸಗಗಳು ಮಾತನಾಡಬೇಕು.
ಅದು ವ್ಯಕ್ತಿತ್ವಕ್ಕೆ ಶೋಭೆ, ಆದರೆ ಇಂದು ಬರೀ ಮಾತಾಡುತ್ತಿದ್ದೇವೆ.
ಕೆಲಸಗಳು ಮೂಲ ಸ್ಥಿತಿಯಲ್ಲಿವೆ ಅಥವಾ ಕೇವಲ ಸೊನ್ನೆಗಳಾಗಿವೆ.
ಮಾನವನ ಮನ ನೊಂದೀತೆಂದು ಸತ್ಯಕ್ಕೆ ಅಪಚಾರ ಮಾಡಬಾರದು,
ಇದರಿಂದ ಹಾನಿ, ನಷ್ಟ, ಮತ್ತು ಭೀತಿ ಉಂಟಾಗುವುದು.

(ಸಂಗ್ರಹ: ಶಿವಕುಮಾರವಾಣಿ)



# ಸಂಗೀತದ ಪ್ರೇರಣಾ ಮೌಲ್ಯಗಳು.

ಜಿ. ವೀರಭದ್ರಪ್ಪ, ಶಾಖಾ ವ್ಯವಸ್ಥಾಪಕರು. ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್,
ನೆಹರು ಗಂಜ್ ಶಾಖೆ, ಗುಲಬರ್ಗಾ,

ಗಾಯನ, ನಾದನ, ನೃತ್ಯ ಈ ಮೂರು ಕಲೆಗಳ ಸಂಗಮವೆ ಸಂಗೀತ. ಗಾಯನವೆಂದರೆ ಹಾಡುವದು ಅಥವಾ ಇದಕ್ಕೆ ಕಂಠ ಸಂಗೀತವೆಂದು ಹೇಳುವದುಂಟು. ನಾದನವೆಂದರೆ ವಾದ್ಯಗಳನ್ನು ನುಡಿಸುವುದು, ಇದರಲ್ಲಿ ತಂತು ವಾದ್ಯಗಳು ಸಿತಾರ, ಸರೋದ, ಸಂತೂರ, ಸಾರಂಗಿ, ಪಿಟೀಲೂ, ಗಿಟಾರ ಮುಂತಾದವು. ಊದುವ ವಾದ್ಯಗಳೆಂದರೆ ಕೊಳಲು, ಶಹನಾಯಿ, ಕ್ಲ್ಯಾರೊನೇಟ್ ಮುಂತಾದವು ಮತ್ತು ಚರ್ಮ ವಾದ್ಯಗಳೆಂದರೆ ಮೃದಂಗ, ತಬಲಾ, ಫಖಾವಜ, ಢೋಲಕೆ, ಮುಂತಾದವು. ನೃತ್ಯಕಲೆ ಎಂದರೆ ಮನುಷ್ಯನ ಅಂತರಂಗದ ಭಾವನೆಗಳನ್ನು ನಯ ವಿನಯದಿಂದ ಅವಯವೋನ್ಮುಖವಾಗಿ ರೂಪಿಸುವ ಕಲೆ.

ನಾವು ಬಾಳುತ್ತಿರುವ ಸೃಷ್ಟಿ ಮುಖ್ಯವಾಗಿ ನಾಲ್ಕು ವೇದಗಳಿಂದಾಗಿದೆ ಎಂದು ಬಲ್ಲವರು ಹೇಳುತ್ತಾರೆ. ಅವುಗಳೆಂದರೆ ಋಗ್ವೇದ ಅರ್ಥವೇದ, ಯುಜುರ್ವೇದ ಮತ್ತು ಸಾಮವೇದ. ಈ ನಾಲ್ಕರಲ್ಲಿ ಒಂದಾಗಿದ್ದ ಸಾಮವೇದವೂ ಸಂಪೂರ್ಣವಾಗಿ ಸಂಗೀತ ಭರತವಾಗಿದೆ. ಸಂಗೀತದ ಜನ್ಮವೂ ಈ ವೇದದಿಂದಲೆಂದು ಹೇಳುತ್ತಾರೆ.

ಸಂಗೀತದ ತಾಯಿ ಬೇರೆಂದರೆ ನಾದ, ನಾದದಲ್ಲಿ ಎರಡು ಭಾಗಗಳು ಅಹತ ನಾದ, ಅನಾಹತನಾದ. ನಾವು ನಮ್ಮ ಎರಡು ಕಿವಿಗಳಲ್ಲಿ ಎರಡು ಬೆರಳುಗಳನ್ನು ಹಾಕಿಕೊಂಡು ಕೆಲವು ಗಳಿಗೆಗಳ ಕಾಲ ಪರಿಶೀಲಿಸಿದರೆ ಒಂದು ಬಗೆಯ "ಘನ ಘನ" ವೆಂಬ ನಾದ ಭಾಸವಾಗುವುದು, ಇದು ಅನಾಹತನಾದ. ಅಹತನಾದವೆಂದರೆ ಮುಟ್ಟುವದರಿಂದ ಹುಟ್ಟುವನಾದ. ಸಂಗೀತದ ಸಂಬಂಧವೂ ಸಂಪೂರ್ಣವಾಗಿ ಈ ನಾದದಿಂದಲೇ ಇದೆ.

ಸಂಗೀತದಲ್ಲಿ ಮುಖ್ಯವಾಗಿ ಇರುವ ಸ್ವರಗಳೆಂದರೆ, 'ಎಳು ಷಡಜ್, ರಿಕ್ಷಬ, ಗಾಂಧಾರ, ಮಧ್ಯಮ, ಪಂಚಮ, ಧೈವತೆ, ಮತ್ತು ನಿಷಾದ, ಸೂಕ್ಷ್ಮವಾಗಿ ಇವುಗಳಿಗೆ ಸ, ರಿ, ಗ, ಮ, ಪ, ಧ, ನಿ, ಎಂದು ಕರೆಯುವದುಂಟು. ಈ ಸ್ವರಗಳು ವೃಷಭ, ಕುರಿ, ಕೋಗಿಲೆ, ಆನೆ ಮತ್ತು ಕುದರೆ ಮುಂತಾದ ಪ್ರಾಣಿ ಮತ್ತು ಪಕ್ಷಿಗಳಿಂದ ಆಯ್ದುಕೊಂಡರೆಂದು ನಮ್ಮ ಶಾಸ್ತ್ರಗಳಲ್ಲಿ ಹೇಳಿದ್ದುಂಟು. ಈ ಏಳು ಸ್ವರ ಸಮೂಹದಲ್ಲಿ ಸ, ಮತ್ತು ಪ ಎರಡು ಅಚಲ ಸ್ವರಗಳೆಂದು, ರೆ, ಗ, ಧ, ನಿ ಕೋಮಲ ಮತ್ತು ಶುದ್ಧ ಹಾಗೂ 'ಮ' ಸ್ವರವೂ ಶುದ್ಧ ಮತ್ತು ತೀವ್ರವೆಂದು ಒಟ್ಟು ಇವೆಲ್ಲವೂ ಕೂಡಿ ಹನ್ನೆರಡು ಸ್ವರಗಳಾಗಿ ಇವುಗಳ ವಾಸಿಸುವ ಸ್ಥಳಕ್ಕೆ ಸಪ್ತಕವೆಂದು ಕರೆಯುವದುಂಟು. ಐದು ಸ್ವರಗಳನ್ನು ಒಳಗೊಂಡ ರಾಗಕ್ಕೆ, ಔಡವ ಜಾತಿ ರಾಗವೆಂದು, ಆರು

ಸ್ವರಗಳ ರಾಗಕ್ಕೆ ಷಾಡವ ಜಾತಿ ಮತ್ತು ಏಳು ಸ್ವರಗಳಿಗೆ ಸಂಪೂರ್ಣ ಜಾತಿ ರಾಗಗಳೆಂದು ಕರೆಯುತ್ತಾರೆ.

ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತವೂ ಮುಖ್ಯವಾಗಿ ಹತ್ತು ಥಾಟುಗಳಲ್ಲಿ ವಿಭಜಿಸಲಾಗಿದ್ದು, ಬೇರೆ ಬೇರೆ ರಾಗಗಳ ಜೋಡಾವಣಿ ಆಯಾ ಥಾಟುಗಳಿಗೆ ಅನುಗುಣವಾಗುವಂತೆ ಮಾಡಲಾಗಿದೆ. ನಮ್ಮ ಶರೀರವೂ 24 ಗಂಟೆಗಳಲ್ಲಿ ವಾತ, ಪಿತ್ತ, ಕಫಗಳೆಂಬ ಮೂರು ಪ್ರಕೃತಿಗಳಲ್ಲಿ ಪರಿವರ್ತಿಸಲ್ಪಡುತ್ತದೆ ಎಲ್ಲ ರಾಗ ರಾಗಿನಿಗಳ ಗಾಯನದ ಸಮಯವೂ ಸಹ ಆಯಾ ಪ್ರಕೃತಿಗೆ ಅನುಗುಣವಾಗುವಂತೆ ನಿರ್ಧರಿಸಲಾಗಿದೆ.

ಸುಪ್ರಭಾತದಲ್ಲಿ ಹಾಡುವ ಮುಖ್ಯವಾದ ರಾಗಗಳೆಂದರೆ, ಭೈರವ, ಭೈರಾಗಿ, ವಿಭಾಸ, ತೋಡಿ. ಲಲಿತ ಮುಂತಾದವು, ಮಧ್ಯಾಹ್ನ ಕಾಲದ ರಾಗಗಳೆಂದರೆ ಅಸಾವರಿ, ಜೀವನಪುರಿ ಮುಂತಾದವು, ಗೋಧೂಳಿ ಸಮಯದಲ್ಲಿ ಹಾಡುವ ರಾಗಗಳು ಭಿಮಪರಾಸ, ಪೂರಿಯಾ, ಮಾರವಾ, ಪೂರಿಯ ಧನ್ನಾಶ್ರಿ ಮುಂತಾದವು. ರಾತ್ರಿ ಸಮಯದಲ್ಲಿ ಹಾಡುವ ರಾಗಗಳೆಂದರೆ ಯಮುನ, ಬಾಗೇಶ್ರಿ, ಭೂಪ, ಮಾರು ಬಿಹಾಗ, ಕೇದಾರ, ದರಬಾರಿ ಕಾನಡಾ, ನಂದ, ಹಂಸಧ್ವನಿ, ಪೂರಿಯಾ ಕಲ್ಯಾಣ, ಜೋಗ, ಮಾಲಕಂಸ, ಚಂದ್ರ ಕಂಸ, ಮುಂತಾದವು. ಈ ಎಲ್ಲ ರಾಗಗಳು ನಿಸರ್ಗದ ಜಡ, ಚೇತನ, ಮತ್ತೆಲ್ಲ ಚರಾಚರಗಳ ಮೇಲೆ ತನ್ನ ಘನವಾದ ರಸಭರಿತ ಪ್ರಭಾವವನ್ನು ಬೀರುತ್ತಾ ನಮ್ಮ ಮನಸ್ಸನ್ನು ಆನಂದರಸ, ಭಕ್ತಿರಸ, ಕರುಣಾರಸ ಮತ್ತು ವೀರರಸ, ಗಳನ್ನು ಒಳಗೊಂಡ ನವರಸಗಳ ಅಲೆಗಳಲ್ಲಿ ದೋಚಿಕೊಂಡು ಹೋದಾಗ ನಾವು ಬೆಪ್ಪಾಗಿ ಒಬ್ಬೊಂಟಿಗರಾಗಿ ನಮ್ಮ ಮನಸ್ಸು ಯಾವಾಗ ಹಿಂತಿರುಗಿ ಬಂದಿತೆಂಬ ದಾರಿಯನ್ನೇ ಕಾಯುತ್ತಿರುತ್ತೇವೆ.

ನಾವು ಬಾಳುವಂಥ ಈ ಪುಣ್ಯ ಭೂಮಿಯು ಅತಿ ಸುಂದರವಾಗಿದ್ದು, ಇದರ ಮೂಲೆ, ಮೂಲೆಗಳಲ್ಲಿಯೂ ಸಂಗೀತ ವಿಪುಲವಾಗಿ ತುಂಬಿಕೊಂಡಿದೆ. ಹರಿಯುವ ಜಲದಲ್ಲಿ ಇಂಪಾದ ಸುಸ್ವರದಲ್ಲಿ ಕಿಲಿ ಕಿಲಿಸುವ ಪಕ್ಷಿಗಳ ಮಂಜುಳವಾದ ಹಾಡಿನಲ್ಲಿ, ಜೀವನದ ಹೆಜ್ಜೆ ಹೆಜ್ಜೆಯಲ್ಲಿಯೂ ಸಂಗೀತ ತುಂಬಿದೆ. ಪರಮಾತ್ಮನ ಈ ಸೃಷ್ಟಿ ಎಲ್ಲವೂ ನಾದಮಯವಾಗಿ ಅಂದರೆ ಸಂಗೀತಮಯವಾಗಿದೆ. ಮಾನವನ ಜನ್ಮದಿಂದ ಮೃತ್ಯುವಿನವರೆಗೆ ಎಲ್ಲ ಸಂದರ್ಭಗಳಲ್ಲಿ ಸಂಗೀತವೂ ಹಾಸು ಹೊಕ್ಕಾಗಿ ಹೆಣೆದುಕೊಂಡು ಜೀವನದ ಸಂಜೀವಿನಿ ಆಗಿ ಪರಿಗಣಿಸಿದೆ. ಮಗು ಜನಿಸಿದ ಕೂಡಲೇ ತೊಟ್ಟಿಲಲ್ಲಿ ಹಾಕುವ ಸಮಾರಂಭದ ಶ್ರೀ ಗಣೇಶವೆಂದರೆ ಸಂಗೀತದಿಂದಲೆ, ಜೀವನ ನೌಕೆ ಮುನ್ನುಗ್ಗಿದಾಗ, ಲಗ್ನ, ಮತ್ತೆಲ್ಲ ಶುಭ ಮುಹೂರ್ತಗಳಲ್ಲಿ ಮಂಗಲ ವಾದ್ಯದ ಮಧುರ ನಿನಾದವು ನಮ್ಮೆಲ್ಲರ ಕಿವಿಗಳಿಗೆ ಇಂಪಾದ ನವರಸದ ಔತಣವನ್ನು ನೀಡುತ್ತದೆ. ಇಷ್ಟೇ ಅಲ್ಲದೇ ಸಂಗೀತದ ಪ್ರಭಾವದಿಂದ ಹುಲಿ, ಕರಡಿ, ಹಾವು ಮುಂತಾದ



ಎಲ್ಲ ಕ್ರೂರ ಜೀವ ಜಂತುಗಳು ತಮ್ಮನ್ನು ತಾವೇ ಮರೆತು ನಾದಬ್ರಹ್ಮನಲ್ಲಿ ತಲ್ಲೀನವಾಗುತ್ತವೆ ವಿದ್ಯುತ್ ಶಕ್ತಿಗಿಂತಲು ಹೆಚ್ಚು ಚಾಪಲ್ಯತೆಯುಳ್ಳ ಮನುಷ್ಯನ ಮನಸ್ಸು ಚಂಚಲವಾಗದಂತೆ ಸೆರೆ ಹಿಡಿದು ನಿಲ್ಲಿಸುವ ಶಕ್ತಿ ಈ ಸಂಗೀತದಲ್ಲಿದೆ. ಈ ಕೆಲಸ ಸಾಮಾನ್ಯವಾದುದ್ದೆ! ಅಂತಯೇ ಇದನ್ನು ನಾದಬ್ರಹ್ಮವೆಂದು ಕರೆಯತ್ತಾರೆ. ನಮ್ಮ ವಸುಂಧರೆ, ಭಾರತಮಾತೆ ಈ ಭೂಮಿ ಪೂಣ್ಯ ಭೂಮಿ ಇಲ್ಲಿ ಸಂಗೀತವೂ ಇದೆ. ಈ ಮಣ್ಣಿನಲ್ಲಿ ಋಷಿ ಮುನಿಗಳ ತಪಸ್ಸು ಇನ್ನೂ ಪ್ರೇರೆಣೆಯಾಗಿದೆ. ಆದರಂತೆ ಸಂಗೀತ ಸಾಧನೆಯೂ ಒಂದು ದೊಡ್ಡ ತಪಸ್ಸು, ಇದು ಜೀವನದ ಉದ್ದಕ್ಕೂ ನಮ್ಮ ದೇಶದಲ್ಲಿ ಸಂಜೀವಿನಿಯಾಗಿ ನಿತ್ಯನೂತನವಾಗಿದೆ. ಆದುದರಿಂದಲೇ ಶಾಸ್ತ್ರೀಯ ಸಂಗೀತದ ಬೇರೆ ಬೇರೆ ಮನೆತನಗಳಿವೆ. ಅವುಗಳಿಗೆ ಘರಾನಾ ಎಂಬುದಾಗಿ ಇನ್ನೊಂದು ಹೆಸರು. ಅವುಗಳಲ್ಲಿ ಮುಖ್ಯವೆಂದರೆ ಗ್ವಾಲಿಯರ, ಮೇವಾತಿ, ಜಯಪೂರ, ಪಟಿಯಾಲಾ ಮೊದಲಾದ ಘರಾನುಗಳು. ಈಬೇರೆ ಬೇರೆ ಪರಾನಾಗಳು ತಮ್ಮದೇ ಆದ ಒಂದು ವಿಶಿಷ್ಟ ಶೈಲಿಯನ್ನು ಬೆಳೆಸಿಕೊಂಡು ಬಂದಿವೆ.

ಇತ್ತೀಚೆಗೆ ಸಂಗೀತದ ಆಧಾರದ ಮೇರೆಗೆ ಎಷ್ಟೋ ಪ್ರಯೋಗಗಳನ್ನು ಮಾಡಲಾಗಿದ್ದು, ಇದರ ಪ್ರಭಾವದಿಂದ ಹಸು ಹೆಚ್ಚು ಹಾಲನ್ನು ನೀಡುವುದಾಗಿ, ಬೆಳೆಗಳ ಇಳುವರಿ ಇಮ್ಮಡಿ ಆಗುವುದಾಗಿ ಕಂಡು ಹಿಡಿಯಲಾಗಿದೆ.

ಅತಿ ಕಠಿಣವೆಂದು ಪರಿಗಣಿಸಲ್ಪಟ್ಟ ರೋಗಗಳು ಯಾವ ಔಷಧಿಗಳಿಂದಲೂ ಗುಣಪಡಿಸಲು ಸಾಧ್ಯವಿಲ್ಲವೋ ಅಂಥ ರೋಗಗಳನ್ನು ಸಂಗೀತ ದಿಂದ ಗುಣಪಡಿಸಲು ಸಾಧ್ಯವೆಂಬುದನ್ನು ನಮ್ಮ ವಿಜ್ಞಾನಿಗಳು ಕಂಡು ಹಿಡಿಯುತ್ತಿದ್ದಾರೆ. ಇದರ ಬಗ್ಗೆ ಅನೇಕಾನೇಕ ಪ್ರಯೋಗಗಳು ನಡೆಯುತ್ತಲಿವೆ.

ಹಿಂದಿನ ಕಾಲದಲ್ಲಿ ಸಂಗೀತಕ್ಕೂ, ಕಲಾಕಾರರಿಗೂ, ರಾಜ್ಯಾಶ್ರಯ ಇದ್ದ ಕಾರಣ ಸಂಗೀತವು ಬೆಳೆದು ವೃದ್ಧಿಯಾಗಿ ಇಂದಿನವರೆಗೆ ಉಳಿದುಕೊಂಡು ಬಂದಿದೆ. ರಾಜಮಹಾರಾಜರ ಕಾಲವು ಕೊನೆಗೊಂಡು ಈಗ ನಾವು ಪ್ರಜಾರಾಜ್ಯದಲ್ಲಿ ಬಾಳುವ ಕಾಲ ಈಗ ಸಂಗೀತ ಮತ್ತು ಕಲಾಕಾರರನ್ನು ನೋಡಿಕೊಳ್ಳುವ ಸಂಪೂರ್ಣ ಬಾಧ್ಯತೆಯು ನಮ್ಮ ಸಮಾಜದ ಮೇಲೆ ಇದೆ. ಇವೆರಡರ ಬೆಳವಣಿಗೆ ಆಗಬೇಕಾದರೆ ನಾವೆಲ್ಲರೂ ನಮ್ಮ ನಮ್ಮ ಶಕ್ತಿಗೆ ಅನುಗುಣವಾಗಿ ತನು, ಮನ, ಧನದಿಂದ ಸಂಪೂರ್ಣ ಸೇವೆ ಸಲ್ಲಿಸುವುದು ಪ್ರತಿಯೊಬ್ಬ ನಾಗರೀಕನ ಪರಮಪವಿತ್ರವಾದ ಕರ್ತವ್ಯವೆಂಬುದನ್ನು ನಾವು ಮನವರಿಸಿಕೊಂಡು ಅದರಂತೆ ನಡೆಯಬೇಕು. ನಮ್ಮ ದೇಶದ ಅಗ್ರ ಗಣ್ಯ ಕಲಾಕಾರರು ಜಗತ್ತಿನ ಎಲ್ಲ ರಾಷ್ಟ್ರಗಳಿಗೆ ಭೇಟಿ ನೀಡಿ ಶಾಸ್ತ್ರಿಯ ಸಂಗೀತದ ರಸಧಾರೆಯನ್ನು ಹರಿಸಿ, ಭಾರತಾಂಬೆಯ ಕೀರ್ತಿ ಪತಾಕೆಯನ್ನು ಗಗನ ದುದ್ದಕ್ಕೆ ಹಾರಿಸಿ ಬಂದಿದ್ದಾರೆ. ಇದರ ಪರಿಣಾಮವಾಗಿ ಬಹಳಷ್ಟು ಜನರಲ್ಲಿ ಸಂಗೀತದ ಅಭಿರುಚಿ ಹುಟ್ಟಿ ಅದರ ಅಭ್ಯಾಸ ಮಾಡಲು ಅವರೆಲ್ಲ ಆರಂಭಿಸಿದ್ದಾರೆ. ಇದಕ್ಕೆ ನಿದರ್ಶನವೆಂದರೆ ಪಂಡಿತ ರವಿಶಂಕರವರು ಅಮೇರಿಕಾದಲ್ಲಿ ಸ್ಥಾಪಿಸಿದ 'ಕಿನ್ನರ

ವೆಂಬ ಸಂಗೀತ ಮಹಾವಿದ್ಯಾಲಯ ಆ ದೇಶದ ಸಾವಿರಾರು ಸ್ತ್ರೀ ಪುರುಷರು ಸಿತಾರವಾದನವನ್ನು ಕಲಿಯುತ್ತಿದ್ದಾರೆ. ಸುಮಾರು ಐದು ವರ್ಷಗಳ ಹಿಂದೆ ಲಂಡನ್ ನಗರದಲ್ಲಿ ಸಂಗೀತ ತಂತು ವಾದ್ಯಗಳ ದೊಡ್ಡ ಪ್ರದರ್ಶನವನ್ನು ಏರ್ಪಾಡು ಮಾಡಲಾಗಿತ್ತು. ಇದರಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳು ಭಾಗವಹಿಸಿ ತಮ್ಮ ತಮ್ಮ ದೇಶದ ಪ್ರಸಿದ್ಧವಾದ ಎರಡೆರಡು ವಾದ್ಯಗಳನ್ನು ಪ್ರದರ್ಶಿಸಲಾಗಿತ್ತು, ಒಟ್ಟಿನಲ್ಲಿ ಸುಮಾರು 150 ಕ್ಕಿಂತಲೂ ಹೆಚ್ಚು ವಾದ್ಯಗಳು ಸೇರಿದ್ದವು, ಈ ಪ್ರದರ್ಶನ ಸುಮಾರು ಒಂದು ತಿಂಗಳು ಕಾಲ ನಡೆದಿದ್ದು ಕೊನೆಗೆ ಎಲ್ಲಾ ವಾದ್ಯಗಳಲ್ಲಿ ಅತಿ ಪುರಾತನವಾದದ್ದು ಮತ್ತು ಶ್ರೇಷ್ಠವಾದ ವಾದ್ಯಗಳ ಆಯ್ಕೆಯ ಸಮಯದಲ್ಲಿ ಒಮ್ಮತವಾಗಿ ಎಲ್ಲಾ ರಾಷ್ಟ್ರದ ವಿದ್ವಾಂಸರು ನಮ್ಮ ಭಾರತ ದೇಶದಿಂದ ಕಳುಹಿಸಿದ ಸಿತಾರ ಮತ್ತು ತಂಬೂರಿ (ತಾನಪುರಾ) ವಾದ್ಯಗಳು ಅತಿ ಪುರಾತನವಾಗಿದ್ದು ಜಗತ್ತಿನ ಎಲ್ಲಾ ತಂತು ವಾದ್ಯಗಳಲ್ಲಿಯೇ ಅತಿ ಶ್ರೇಷ್ಠವಾದ್ಯಗಳೆಂದು ನಿರ್ಣಯಿಸಿದ್ದಾರೆ. ಇವೆರಡು ವಾದ್ಯಗಳು ಒಂದು ಸಾವಿರಕ್ಕಿಂತಲೂ ಹೆಚ್ಚು ವರ್ಷಗಳ ಹಿಂದೆ ಹುಟ್ಟಿದ ವಾದ್ಯಗಳೆಂದು ಪರಿಗಣಿಸಲಾಗಿದೆ, ಇದು ನಮ್ಮ ಸಂಸ್ಕೃತಿ ಮತ್ತು ಕಲೆಯ ಹಿರಿಮೆಯನ್ನು ತೋರಿಸಿಕೊಡುತ್ತದೆ.

ಮನುಷ್ಯನು ಇಂದಿನ ತಾಂತ್ರಿಕ ಯುಗದಲ್ಲಿ ವಿಜ್ಞಾನದಲ್ಲಿ ಎಷ್ಟು ಸಾಫಲ್ಯತೆ ಪಡೆದರೂ ಅವನ ಮನಸ್ಸಿಗೆ ಶಾಂತಿ, ಸಮಾಧಾನವಿಲ್ಲ. ಇವುಗಳನ್ನು ಪಡೆಯಬೇಕಾದರೆ, ಮನಸ್ಸು ಏಕಾಗ್ರಚಿತ್ತವಾಗಬೇಕಾದರೆ ಸಂಗೀತದಿಂದಲೇ ಮಾತ್ರ ಸಾಧ್ಯ. ನಮ್ಮ ಪೂರ್ವಜರ ತಪಸ್ಸಿನ, ತ್ಯಾಗದ ಫಲವಾದ ಸಂಗೀತವು ನಮಗೆ ಅವರಿಂದ ಬಂದ ಅತಿ ದೊಡ್ಡ ಕಾಣಿಕೆ. ಅದರ ಹಿರಿಮೆ ಮತ್ತು ಬೆಲೆಯನ್ನು ಅರಿತು ಈ ಪರಂಪರೆಯನ್ನು ಕಾಪಾಡಿಕೊಂಡು ಹೋಗಿ ಮುಂದಿನ ಜನಾಂಗಕ್ಕೆ ಅದನ್ನು ಒಪ್ಪಿಸುವುದು ನಮ್ಮ ಕರ್ತವ್ಯ. ಈಗಾಗಲೇ ಕಾಲೇಜು ಮತ್ತು ಶಾಲೆಗಳಲ್ಲಿ ಮಕ್ಕಳಿಗೆ ಶಾಸ್ತ್ರೀಯ ಸಂಗೀತಾಭ್ಯಾಸ ಮಾಡಿಸುವ ಕೆಲಸ ನಡೆಯುತ್ತಿದ್ದು ಸಂಗೀತದ ಪ್ರತಿಭೆ ಮತ್ತು ಮಹತ್ವ ಹೆಚ್ಚುತ್ತಿದೆ. ಪ್ರತಿ ಒಬ್ಬ ನಾಗರೀಕನು ತನ್ನ ಕುಟುಂಬದಲ್ಲಿ ಕನಿಷ್ಠವೆಂದರೆ ಒಬ್ಬ ಮಗುವಿಗೆ ತಪ್ಪದೆ ಸಂಗೀತಾಭ್ಯಾಸ ಮಾಡಿಸಲು ಮುಂದೆ ಬರಬೇಕು. ನಮ್ಮ ಮನೆಯಲ್ಲಿ ಲಗ್ನ ಮುಂತಾದ ವಿಶೇಷ ಸಂದರ್ಭಗಳಲ್ಲಿ ಪವಿತ್ರವಾದ ಸಂಗೀತ ಕಾರ್ಯಕ್ರಮವನ್ನು ತಪ್ಪದೆ ಏರ್ಪಡಿಸಿದಲ್ಲಿ ಆ ಸಂದರ್ಭಕ್ಕೆ ಇನ್ನೂ ಹೆಚ್ಚಿನ ಶೋಭೆ ಬರುತ್ತದೆ.

ವಿದ್ಯಾಬುದ್ಧಿಯನ್ನು ನೀಡುವ ಶ್ರೀ ವಿಘ್ನೇಶ್ವರ ಮತ್ತು ಸರಸ್ವತಿ ಮಾತೆಯರು ನಮ್ಮೆಲ್ಲರಿಗೆ ಸಂಗೀತದ ಬೆಳವಣಿಗೆಗಾಗಿ ದುಡಿಯುವ ಶಕ್ತಿ ದಯಪಾಲಿಸಲೆಂದು, ನಾವು ಕರ್ತವ್ಯ ನಿಷ್ಠರಾಗಿ ಒಳ್ಳೆ ನಾಗರೀಕರಾಗಿ ಬಾಳಿ ನಮ್ಮ ದೇಶದ ಗೌರವ ಮತ್ತು ಕೀರ್ತಿಗಳನ್ನು ಇಮ್ಮಡಿಸಲು ಒಂದಾಗಿ ದುಡಿಯಲು ಪ್ರೇರಣೆ ನೀಡಬೇಕೆಂದು ಪ್ರಾರ್ಥಿಸಬೇಕು. ಓಂ ನಮೋ ನಾದಬ್ರಹ್ಮಣೇಯ ನಮಃ

ಸಿದ್ಧಗಂಗಾ



# ಪ್ರಾಣಿಗಳಿಂದ ಭೂಕಂಪದ ಭವಿಷ್ಯ ?

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಜ್ಜಿನ - 574295 ದಕ್ಷಿಣ ಕನ್ನಡ ಜಿಲ್ಲೆ.

ಉತ್ತರ ಇಟಲಿಯಲ್ಲಿ ೧೯೭೬ ರಲ್ಲಿ ಭೀಕರ ಭೂಕಂಪವೊಂದು ಸಂಭವಿಸಲು ಕೆಲವೇ ತಾಸುಗಳಿದ್ದವು ಆಗ ಇದ್ದಕ್ಕಿದ್ದಂತೆಯೇ ನಾಯಿಗಳು ಕರ್ಕಶವಾಗಿ ಬೊಗಳುತ್ತಲೇ ಇದ್ದವು ಏನೋ ಒಂದು ವಿನಾಶಕಾಲಕ್ಕೊಳಗಾದಂತೆ ಪಂಜರದೊಳಗಿದ್ದ ಹಕ್ಕಿಗಳು ರೆಕ್ಕೆ ಬಡಿಯತೊಡಗಿದವು. ಕೋಳಿಗಳು ಕೂಗಲಾರಂಭಿಸಿದವು. ದನ ಎತ್ತು ಮೊದಲಾದ ಪ್ರಾಣಿಗಳು ಹಗ್ಗ ಬಿಡಿಸಿಕೊಂಡು ಓಡ ತೊಡಗಿದವು. ಹಾವು, ಇಲಿಗಳು ಬಿಲದಿಂದ ಹೊರಬಂದು ದಿಕ್ಕು ದಿಕ್ಕಿನತ್ತ ಸಾಗಿದರೆ ಗುಡ್ಡಗಳಿಂದ ಜಿಂಕೆಗಳು ಕೆಳಗಿಳಿಯಲಾರಂಭಿಸಿದವು ........ ರೈತರು ತೋಳಗಳ ಧಾಳಿಯ ಸೂಚನೆ ಎಂದು ತಿಳಿದಿದ್ದರು.

ಆದರೆ ಜಗತ್ತಿನ ಹಲವು ವಿಜ್ಞಾನಿಗಳಿಗೆ ಬಳಿಕ ಪ್ರಾಣಿಗಳ ಈ ವರ್ತನೆಗೆ ಭೂಕಂಪದ ಮುನ್ಸೂಚನೆಯೇ ಕಾರಣವೆಂಬುದು ಮನದಟ್ಟಾಯಿತು. ಭೂಕಂಪ ಸಂಭವಿಸುವ ಕೆಲವು ತಾಸುಗಳ ಮೊದಲು ಪ್ರಾಣಿಗಳ ವರ್ತನೆ ಬದಲಾಗುತ್ತದೆ. ಇದನ್ನಾಧರಿಸಿ ಭೂಕಂಪದ ಬಗೆಗೆ ಭವಿಷ್ಯ ನುಡಿಯಬಹುದೆಂದು ಹಲವಾರು ಮುಂದುವರೆದ ರಾಷ್ಟ್ರಗಳ ವಿಜ್ಞಾನಿಗಳೂ ಒಪ್ಪುತ್ತಾರೆ.

೧೯೭೬ ರಲ್ಲಿ ಚೀನದ ಹಾಯ್ ಚಿಂಗ್ ನಗರದಲ್ಲಿ ಸಹಸ್ರಾರು ಜನರ ಸಾವಿಗೆ ಕಾರಣವಾಗಬಲ್ಲುದೆಂದು ಚೀನಿ ವಿಜ್ಞಾನಿಗಳು ಭೂಕಂಪದ ಬಗೆಗೆ ಭವಿಷ್ಯ ನುಡಿದಾಗ ನಗರವಾಸಿಗಳು ಅಲ್ಲಿಂದ ವಲಸೆ ಹೋಗಲಾರಂಭಿಸಿದರು. ಆಗ ಇತರ ದೇಶಗಳ ವಿಜ್ಞಾನಿಗಳು ತಾಂತ್ರಿಕ ದೃಷ್ಟಿಯಿಂದ ಪ್ರಗತಿಹೊಂದದ ಚೀನದಲ್ಲಿ ಆಧುನಿಕ ವೈಜ್ಞಾನಿಕ ಯಂತ್ರಗಳೂ ಬಳಕೆಯಲ್ಲಿಲ್ಲ. ಇವರ ಹೇಳಿಕೆ ನಿಜವಾಗಲು ಹೇಗೆ ಸಾಧ್ಯ ಎಂದು ಬೆರಗಾಗಿ ಅದನ್ನು ಪರಿಶೀಲಿಸಲು ಹಾಯ್ ಚಿಂಗ್ ನಗರಕ್ಕೆ ಭೇಟಿಯಿತ್ತರು. ಚೀನಿ ವಿಜ್ಞಾನಿಗಳ ಹೇಳಿಕೆ ಅವರಿಗೆ ಅವಹೇಳನಕರವೆನಿಸಿತು.

ಅಮೇರಿಕದ ಭೂಗರ್ಭ ಶಾಸ್ತ್ರಜ್ಞರನ್ನೊಳಗೊಂಡು ಅಲ್ಲಿಗೆ ಬಂದ ವಿಜ್ಞಾನಿಗಳಿಗೆ ಚೀನೀ ಭೂಕಂಪ ವಿಶೇಷಜ್ಞರು ಪಶು ಪಕ್ಷಿಗಳ ವ್ಯವಹಾರದಲ್ಲಿ ಉಂಟಾದ ದಿಢೀರ್ ಬದಲಾವಣೆಯೇ ತಮ್ಮ ಹೇಳಿಕೆಗಳಿಗೆ ಕಾರಣವೆಂದರು. ಹೇಂಟೆಗಳು ಗೂಡಿನಿಂದ ಹೊರಬರಲು ಒದ್ದಾಡುತ್ತವೆ, ಹಾವುಗಳು ಬಿಲದಿಂದ ಹೊರಬಂದು, ಎಲ್ಲೆಡೆಯೂ ಹರಿದಾಡುತ್ತವೆ' ಮೀನುಗಳು ನೀರಿನಾಳ ಸೇರಿವೆ, ತರಬೇತಿ ಹೊಂದಿದ ಪೋಲಿಸ್ ನಾಯಿಗಳು ಒಡೆಯನ ಆಣತಿಗೆ ನಿರಾಕರಿಸುತ್ತಿವೆ. ಇದರೊಂದಿಗೆನಗರದ

ಬಳಿಯ ನೆಲದಲ್ಲೂ ಏರುಪೇರುಂಟಾಗಿದೆ. ಬಾವಿಗಳ ನೀರಿನ ಮಟ್ಟ ದಿಢೀರೆಂದು ಏರಿದೆ. ಬೆಟ್ಟಗಳ ಇಳಿಜಾರಿನಲ್ಲಿ ಸ್ವಲ್ಪ ಮಟ್ಟಿನ ಅಂತರವುಂಟಾಗಿದೆ. ನೀರಿನಲ್ಲಿ ರೇಡಿಯೋ ಥರ್ಮಿ ಅನಿಲ ರೇಡಾನಿನ ಪ್ರಮಾಣ ಏರಿದೆ ಎಂದು ತಿಳಿಸಿದ್ದಲ್ಲದೆ ೧೧ವರ್ಷಗಳ ಹಿಂದೆ ಪೀಕಿಂಗಿನಲ್ಲಿ ಭೂಕಂಪ ನಡೆದಾಗಲ ಇದೇ ರೀತಿಯ ಅವಸ್ಥೆ ಉಂಟಾಗಿತ್ತು. ಮೃಗಾಲಯುಗಳ ಪ್ರಾಣಿಗಳು ವಿಚಿತ್ರವಾಗಿ ವರ್ತಿಸಿದ್ದವು. ಕೆಲವು ಪ್ರಾಣಿಗಳು ವರ್ತುಲಾಕಾರವಾಗಿ ಕುಣಿಯ ತೊಡಗಿದ್ದವು ಎಂದರು.

ಚೀನೀ ವಿಜ್ಞಾನಿಗಳ ಭವಿಷ್ಯ ಪ್ರಕಾರ ಹಾಯ್‌ಚಿಂಗ್ ನಗರದಲ್ಲಿ ಭೂಕಂಪ ಸಂಭವಿಸಿತು. ಮೊದಲೇ ಜನರು ವಲಸೆ ಹೋಗಿದ್ದುದರಿಂದ ಜನನಾಶವಾಗಲಿಲ. ೧೯೭೬ ರಲ್ಲಿ ದಕ್ಷಿಣ ಪೀಕಿಂಗಿನಲ್ಲಿ ಸಂಭವಿಸಿದ ಭೂಕಂಪದಿಂದ ಸಹಸ್ರಾರು ಜನರು ಸತ್ತರು. ರಾಷ್ಟ್ರಾಧ್ಯಕ್ಷಮಾವೋ ಭೂಕಂಪದ ಬಗೆಗೆ ಸ್ಪಷ್ಟ ಭವಿಷ್ಯವಾಣಿ ನುಡಿಯಲು ವಿಜ್ಞಾನಿಗಳಿಗೆ ನೀಡಿದ ಕರೆಯಂತೆ ರಾಷ್ಟ್ರೀಯ ಮಟ್ಟದ ಪ್ರಯೋಗಗಳು ನಡೆದವು. ಇದರಿಂದ ಪಶುಪಕ್ಷಿಗಳ ವರ್ತನೆಯಲ್ಲಿ ಆಗುವ ಬದಲಾವಣೆಯೇ ಭೂಕಂಪದ ನೈಸರ್ಗಿಕ ಮುನ್ಸೂಚನೆ ಎಂಬುದು ತಿಳಿಯಿತು.

ಅಲ್ಲದೆ ಭೂಕಂಪದ ಭವಿಷ್ಯ ಹೇಳಲು ಇನ್ನೊಂದು ಬೃಹತ್ ವ್ಯವಸ್ಥೆಯೂ ಅಲ್ಲಿ ರೂಪಿತವಾಗಿದೆ. ೫ ಸಾವಿರ ಭೂಗರ್ಭ ಶಾಸ್ತ್ರಜ್ಞರಿಂದ ತರಬೇತಿ ಹೊಂದಿದ ೧೦ ಲಕ್ಷ ಚೀನೀಯರು ಹಳ್ಳಿಯಲ್ಲಿರುವ ಜಲಾಶಯಗಳಲ್ಲಿ ನೀರಿನ ರೇಡಾನ್ ಅನಿಲ ಪ್ರಮಾಣ ಏರುತ್ತಿದೆಯೆ ಎಂದು ಆಗಾಗ ಅಳೆಯುತ್ತಾರೆ. ರೈತರು ಸಾಕಿದ ಪ್ರಾಣಿಗಳ ವರ್ತನೆಯಲ್ಲಿ ಅತಿರೇಕವುಂಟಾದರೆ ಸಂಬಂಧಿಸಿದ ವಿಭಾಗಕ್ಕೆ ತಿಳಿಸುವುದೂ ಅವರ ಕರ್ತವ್ಯವಾಗಿದೆ.

ಚೀನದ ಈ ಸಿದ್ಧಾಂತ ಬರೀ ಪೊಳ್ಳಲ್ಲ, ಸತ್ಯಾಂಶವಿದೆ ಎಂದು ಪಶ್ಚಿಮ ಜರ್ಮನಿಯ ಜೀವಭೌತಿಕ ವಿಜ್ಞಾನ ಹೆಲ್ಮುತ್ ಟೇಬ್ರಿಚ್ ಹೇಳುತ್ತಾರೆ. ಇಟಲಿಯ ಆಲ್ಪ್ಸ ಗಿರಿ ಪ್ರದೇಶದ ಬಳಿಯಲ್ಲಿ ಭೂಂಕಪ ಸಂಭವಿಸುವ ಕೆಲವು ತಾಸುಗಳ ಮೊದಲು ಬೆಕ್ಕುಗಳು ಮನೆ ಬಿಟ್ಟು ಎಲ್ಲೆಲ್ಲೋ ಓಡಿದ್ದವಂತೆ. ಪ್ರಾಣಿಗಳು ಹುಚ್ಚುಗಟ್ಟಿ ಓಡಲೆಳೆಸಿದವು. ಆದ್ದರಿಂದ ಪ್ರಾಣಿಗಳ ಭೂಕಂಪದ ಭವಿಷ್ಯ ನುಡಿಯುವ ಶಕ್ತಿ ಇದೆ ಎಂದು ಅವರ ವಾದ.

೧೯೭೪ರಲ್ಲಿ ಕೆಪೊಲೀರ್ನಿಯದಲ್ಲಿ ಭೀಕರ ಭೂಕಂಪ ಸಂಭವಿಸುವ ಮುನ್ನ ಕುದುರೆಗಳ ವರ್ತನೆ ಬದಲಾಯಿತು. ತರಬೇತಿ ಹೊಂದಿದ ಕುದುರೆಗಳು ಆಹಾರ ಸ್ವೀಕರಿಸದೆ ನೊಂಡುತನದಿಂದ ನಿಂತುಕೊಂಡವು. ಕೆಲವು ಕೆಳಗೆ ಬಿದ್ದವು. ಅಮೇರಿಕದ ಭೂಗರ್ಭ ಶಾಸ್ತ್ರಜ್ಞರು ಈ ವಿಚಾರವನ್ನು ಉಲ್ಲೇಖಿಸಿದ್ದಾರಲ್ಲದೆ ವಿಜ್ಞಾನಿಗಳು ಇಂತಹ ಹಲವು



ಪ್ರಸಂಗಗಳನ್ನು ಈಗ ಆಳವಾಗಿ ಅಧ್ಯಯನ ಮಾಡುತ್ತ ಇದ್ದಾರೆ. ಅಮೇರಿಕದ ವಿಜ್ಞಾನಿ ಕ್ಲಾರಿನ್ಸ್ ಎಲೆನ್ ಪ್ರಕಾರ ಪ್ರಾಣಿ ಪಕ್ಷಿಗಳ ಅತಿರೇಕ ವರ್ತನೆ ಭೂಕಂಪದ ಭವಿಷ್ಯ ಹೇಳ ಬಲ್ಲುದೆಂಬುದನ್ನು ನಿರಾಕರಿಸುವಂತಿಲ್ಲ. ಮನುಷ್ಯ ಮತ್ತು ವೈಜ್ಞಾನಿಕ ಯಂತ್ರ ಗಳಿಗಿಂತಲೂ ಭೌತಿಕ ಪ್ರಭಾವಗಳು ಹೆಚ್ಚು ಸಂವೇದನಾ ಶೀಲವಾಗಿರುತ್ತವೆ ಹಕ್ಕಿಗಳಿಗೆ ಅತಿ ಸೂಕ್ಮ ಕಂಪನ ಗಳನ್ನು ತಿಳಿಯಬಲ್ಲ, ಅತೀತ ಕಿರಣಗಳನ್ನು ನೋಡಬಲ್ಲ ಶಕ್ತಿಯಿದೆ. ನಾಯಿಯ ಶ್ರವಣಶಕ್ತಿ ಮಾನವನಿಗಿಂತ ಅಧಿಕ. ನೆಲದಲ್ಲಿ ಭೂಕಂಪದ ಕೆಲವು ತಾಸುಗಳ ಮೊದಲೇ ಉಂಟಾಗುವ ಸೂಕ್ಷ್ಮ ಪರಿವರ್ತನೆ, ನಡುಕು ಅವಕ್ಕೆ ಅರಿವಾಗುತ್ತದೆ. ಆದರಿಂದ ಪಾರಾಗಲು ಯತ್ನಿಸುತ್ತವೆ. ಈ ಚಡಪಡಿಕೆಯೇ ಅವುಗಳ ವರ್ತನೆಯಲ್ಲಿ ಕಾಣುವ ಬದಲಾವಣೆ ಎನ್ನುತ್ತಾರೆ.

ಜರ್ಮನ್ ವಿಜ್ಞಾನಿಗಳ ಪ್ರಕಾರ ನೆಲದೊಳಗಿರುವ ಬಂಡೆಗಳು ಭೂಕಂಪಕ್ಕೆ ಸ್ವಲ್ಪ ಮೊದಲು ಮೇಲಿರುವ ಬಂಡೆಗಳ ಮೇಲೆ ಒತ್ತಡ ಹೇರುವವು. ಆಗ ಮಣ್ಣಿನ ಮೇಲ್ಪದರ ವಿದ್ಯುತ್ ಚುಂಬಕ ಶಕ್ತಿಗೊಳಗಾಗಿ ವಾತಾವರಣದ ಮೇಲೆ ಪ್ರಭಾವ ಬೀರುತ್ತದೆ. ಆದ್ದರಿಂದ ಪ್ರಾಣಿಗಳು ರೋಮಾಂಚನ ಹೊಂದಿ ಒದ್ದಾಟ ಆರಂಭಿಸುತ್ತವೆಯಂತೆ.

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

---

# ವಿದ್ಯಾರ್ಥಿ ಜೀವನದ ಬೆಳಕು ಸರಣಿ.

ಬಿ. ಎಸ್, ಕೃಷ್ಣಮೂರ್ತಿ ನಂ. 5, ಸೀತಾ ವಿಲಾಸ ರಸ್ತೆ, ಮೈಸೂರು. 570,024.

ನೀತಿಮಾರ್ಗ:- ವಿದ್ಯಾರ್ಥಿಗಳು ತಾವು ಓದುವ ಪರೀಕ್ಷೆಗಳಿಗೆ ಇಟ್ಟಿರುವ ಪುಸ್ತಕಗಳನ್ನು ಮಾತ್ರ ಓದಿದರೆ ಸಾಲದು. ಪರಮ ಶ್ರೇಷ್ಠ ಜ್ಞಾನಿಗಳ ನೀತಿ ವಚನ ಗಳಿಗೂ ಮನಸ್ಸನ್ನು ಕೊಡಬೇಕು. ಏಕೆಂದರೆ ನೀತಿ ಬಾಹಿರನ ಓದು ಎಷ್ಟೇ ಹಿರಿದಾಗಿದ್ದರೂ ಹೀನವೆಂದು ಪರಿಗಣಿಸಲ್ಪಟ್ಟದೆ ಒಬ್ಬ ಕವಿ ಹೀಗೆ ಹೇಳಿದ್ದಾನೆ.

ನೀತಿ ನೆಲೆಯನು ಅರಿತು ಚರಿಪುದು|
ಪಾತಕವು ಹಿಮ್ಮೆಟ್ಟುವುದು, ನಿಜ|
ನೀತಿರೀತಿಯತಿಳಿದು ನಡೆವವ ಜಗದಿಸಜ್ಜನನು ||

ನಿಜ ಹೇಳುವುದಾದರೆ ಮೂರು ನಾಲ್ಕು ದಶಕಗಳ ಹಿಂದೆ ಶಾಲೆಗಳಲ್ಲಿ ವಿದ್ಯಾಭ್ಯಾಸ ಇಲಾಖೆಯುವರು ಪ್ರೈಮರಿ ತರಗತಿಗಳಲ್ಲಿ ನೀತಿ ಪಾಠಗಳನ್ನು ಬೋಧಿಸಲು ವಾರದಲ್ಲಿ ಎರಡು ಮೂರು ಪೀರಿಯಡ್‌ಗಳನ್ನ ಮೀಸಲಾಗಿಡುತ್ತಿದ್ದರು. ಈಚಿನ ವಿದ್ಯಾಭ್ಯಾಸದಲ್ಲಿ ಆಂಗ್ಲೇಯ ಭಾಷೆಯ ಮೋಹ ಹೆಚ್ಚು, ಹಿಂದೆ ಪ್ರಾಬಲ್ಯವಿದ್ದ ನೀತಿ ಪಾಠಗಳು ಮೂಲೋತ್ಪಾದನೆಯಾಗಿವೆ. ಇದು ವ್ಯಸನಕರ!

ಹಿಂದಿನ ದಿನಗಳಲ್ಲಿ ಅನೇಕ ಲೇಖಕರು ನೀತಿಕಥೆಗಳನ್ನು ಬರೆದಿದ್ದರು. ಆ ಪುಸ್ತಕಗಳನ್ನು ಶಾಲೆಗಳಲ್ಲಿ ಕಡ್ಡಾಯವಾಗಿ ಓದಲು ನೇಮಿಸುತ್ತಿದ್ದರು. ಹೀಗಾಗಿ ಪ್ರತಿ ವಿದ್ಯಾರ್ಥಿಯೂ ಆ ನೀತಿ ಪುಸ್ತಕಗಳನ್ನು ಕೊಂಡು ಓದಲೇಬೇಕಾಗಿತ್ತು. ಅದರಲ್ಲಿರುವ ನೀತಿಯನ್ನು ಅನುಷ್ಠಾನಕ್ಕೆ ತರಲೂಬೇಕಾಗಿತ್ತು.

ಹಿಂದಿದ್ದ ನೀತಿ ಕಥೆಗಳು 'ಕಥಾಸಪ್ತಕ' ಕಥಾಮಂಜರಿ, ನೀತಿಮಂಜರಿ' ನೀತಿ ಚಿಂತಾಮಣಿ, ನೀತಿಬೋಧೆ, ನೀತಿಸಾರ, ಎಂಬ ನಾಮಾಂಕಿತಗಳಿಂದ ಪ್ರಸಿದ್ಧ ವಾಗಿದ್ದವು ಇವುಗಳಲ್ಲಿ 'ನೀತಿ ಚಿಂತಾಮಣಿ' ಎಂಬ ಪುಸ್ತಕವು ಹೆಸರಾಂತ ನೀತಿ ನಿರ್ದೇಶಕರಿಂದ ಮೂರು ಭಾಗದ ಪುಸ್ತಕಗಳಾಗಿ ಪ್ರಸಿದ್ಧಿ ಹೊಂದಿವೆ.

ಮೇಲ್ಕಾಣಿಸಿರುವ ಮೂರು ಭಾಗಗಳಲ್ಲೂ ಪುರಾಣ, ಇತಿಹಾಸ, ರಾಮಾಯಣ, ಭಾರತ ಭಾಗವತದ ಕಥೆಗಳಿಂದ ಭರಿತವಾಗಿ, ವಿದ್ಯಾರ್ಥಿಗಳನ್ನು ಮನರಂಜಿಸು ತ್ತಿದ್ದವು. ಅವುಗಳೆಲ್ಲಾ ಶ್ರೇಷ್ಠಮಟ್ಟದವು. ಈಗಿನ ವಿದ್ಯಾಭ್ಯಾಸ ಇಲಾಖೆಯ ವರು ಈ ಪುಸ್ತಕಗಳನ್ನು ತುಚ್ಛವಾಗಿ ಹಿಂದೆ ಸರಿಸಿರುವುದು ತುಂಬಾವ್ಯಸನಕರವೆಂದು ಹೇಳದೆ ವಿಧಿಯಿಲ್ಲ. ಆದ್ದರಿಂದಲೇ ಈಗಿನ ವಿದ್ಯಾರ್ಥಿಗಳು ನೀತಿ ಏನೆಂಬುದನ್ನೇ ತಿಳಿಯದೆ ಅ ನೀತಿವಂತರಾಗಿ ದೇಶಕ್ಕೂ, ಸಮಾಜಕ್ಕೂ ಕಂಟಕರಾಗಿರುವರು.



ಇಂಥಾ ಅನೀತಿವಂತ ವಿದ್ಯಾರ್ಥಿಗಳನ್ನು ತಿದ್ದಿ ಅವರ ಏಳಿಗೆ ಯತ್ನಿಸದಿರುವುದು ದುರದೃಷ್ಟಕರ. ಈ ಕನ್ನಡ ನೀತಿ ಕಥೆಗಳ ಮಾದರಿಯಲ್ಲಿ, ಆಂಗ್ಲೇಯ ಭಾಷೆಯಲ್ಲಿ "ಈಸೋಫ" ನಕಥೆಗಳು ಮಾದರಿಯಾಗಿವೆ. ಈ ಕಥೆಗಳು ಓದಿದಾಗ ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಹೆಚ್ಚು ಸತ್ಪರಿಣಾಮಗಳನ್ನು ಬೀರುವಂಥಾ ನೀತಿಕಥೆಗಳಾಗಿವೆ. ಅವನ್ನು ಓದಲು ಮನರಂಜನೆಯಾಗಿ, ರಂಜಿಸುತ್ತಿವೆ ಮಾತ್ರವಲ್ಲದೆ ಜ್ಞಾನಾರ್ಜನೆಗೆ ಸಹಕಾರಿಯಾಗಿವೆ. ಇನ್ನೂ ಹೇಳಬೇಕೆಂದರೆ ಸಂಸ್ಕೃತದಲ್ಲಿಯೂ 'ಹಿತೋಪದೇಶ,' 'ಪಂಚತಂತ್ರ' ಗಳೆಂಬುವುಗಳು ವಿದ್ಯಾರ್ಥಿಗಳನ್ನು ಮಾತ್ರವಲ್ಲದೆ ನೀತಿಗಳ ನೆಲಗಟ್ಟನ್ನು ಅರಿಯಲು ಸಾರ್ವಜನಿಕರಿಗೂ ಸರಿಸಮಾನವಾಗಿವೆ. ಈ ನೀತಿಗಳು ಆದರ್ಶಗಳ ಮೂಲಕ ಓದುಗರ ಮನಸ್ಸಿನ ಮೇಲೆ ಪ್ರತಿಬಿಂಬಿತವಾಗಿ, ಉತ್ತಮ ಪರಿಣಾಮವನ್ನು ಬೀರುತ್ತವೆ. ಇದು ಮಾತ್ರವಲ್ಲದೆ ಜ್ಞಾನ, ತಿಳುವಳಿಕೆ ಹೆಚ್ಚುವುದೆಂಬುದನ್ನು ಸಂದೇಹ ಪಡದೆ ಒಪ್ಪಬಹುದಾಗಿದೆ. ಇವು ಸನ್ಮಾರ್ಗದರ್ಶಿಗಳೆಂದು ತಿಳಿಯಬೇಕು.

ಯಾರು ನೀತಿ ಮಾರ್ಗದಲ್ಲಿ ನಡೆಯುತ್ತಾರೋ, ಸತ್ಪುರುಷರನ್ನು ತಮ್ಮ ಸೇವೆ ಯಿಂದ ತೃಪ್ತಿಪಡಿಸುವರೋ ಅವರ ಸಮಾನ ಶ್ರೇಷ್ಠರು ಯಾರು ಇಲ್ಲ. ಇಂಥವರನ್ನು ಮಹಾತ್ಮರೆಂದು ಕರೆಯಬಹುದು, ನೀತಿಯೊಂದಿಗೆ ಶೀಲವನ್ನೂ ಉಳಿಸಿಕೊಂಡರೆ ಅಂಥ ವರ ಬಾಳು ಸಾರ್ಥಕ. ನೀತಿ ಅನುಕರಣೆಯಿಂದ ಪಾಪಶಂಕೆಯ ಭಯವಿಲ್ಲ. ಸುಜ್ಞಾನವು ನೀತಿಗಳ ಸಾರವೇ ಆಗಿದೆ! ಈ ನೀತಿಯೇ ಮನುಷ್ಯನಿಗೆ ರಕ್ಷಾಕವಚ. ಅನೀತಿಗೊಳ ಗಾದ ಮಾನವ ಅಧಃಪತನ ಹೊಂದುತ್ತಾನೆಂಬುದು ಕಟುಸತ್ಯ!

# ವರತಪಸ್ವಿ (ಧಾರಾವಾಹಿ - ೨)

ಜಿ. ರಾಧಾದೇವಿ, ಕಾದಂಬರಿಗಾರ್ತಿ, ಬೆಸ್ತವಾರ ಪೇಟೆ, ರಾಯಚೂರು - 584101

ಸಂ:- ಶ್ರೀ ಧರ್ಮಸ್ಥಳದ ಮಂಜಯ್ಯ ಹೆಗ್ಗಡೆ ಅವರ ಮಹಾಸಾಧನೆ ಕುರಿತು ಜಾನಪದದ ರೂಪದಲ್ಲಿ ಧಾರಾವಾಹಿಯಾಗಿ ಪರಿಚಯಮಾಡಿಕೊಟ್ಟಿದ್ದಾರೆ.

ನಮ್ಮ ಶ್ರೀ ಮಂಜಯ್ಯ ಹೆಗಡೇರು ಸುವ್ವಲಾಲಿ
ಶ್ರೀ ಕ್ಷೇತ್ರದ ಗುರುವಾಗಿ ಬಾಳಿದರು ಸುವ್ವಲಾಲಿ,
ನಮ್ಮ ಶ್ರೀ ಮಂಜಯ್ಯ ಹೆಗಡೇರು ಸುವ್ವಲಾಲಿ,
ಶ್ರೀ ಕ್ಷೇತ್ರದ ದೊರೆಯಾಗಿ ಬಾಳಿದರು ಸುವ್ವಲಾಲಿ.

ಶ್ರೀ ಮಂಜಯ್ಯ ಹೆಗಡೆಯವರ ಅಧಿಕಾರ ಲೌಕಿಕ ಕ್ಷೇತ್ರದಲ್ಲಿಯೂ ವಿಜೃಂಭಿಸಿತು, ಮದ್ರಾಸ್ ಲೆಜಿಸ್ಲೇಚರ್ ಕೌನ್ಸಿಲ್ ಸದಸ್ಯರಾಗಿ ಕಾರ್ಯ ನಿರ್ವಹಿಸಿದ ಇವರು ಅನೇಕ ಮಂತ್ರಿ ಮಾನ್ಯರೊಡನೆ ಗಣ್ಯ ನ್ಯಾಯಾಧೀಶರೊಡನೆ ಸ್ನೇಹ ಸಂಪರ್ಕ ಹೊಂದಿದ್ದರು.

ಅಧಿಕಾರ, ಕೀರ್ತಿ, ಸಂಪತ್ತು ಎಲ್ಲಾ ಒಲಿದು ಬಂದಿದ್ದರೂ ಇವರು ಅತ್ಯಂತ ಸರಳ ಜೀವಿಗಳಾಗಿದ್ದರು, ಉದಯಕಾಲದಲ್ಲೆದ್ದು ಸ್ನಾನ, ದೇವತಾ ಪ್ರಾರ್ಥನೆ ಮಾಡಿ ಶ್ರೀ ಕ್ಷೇತ್ರದ ಆಡಳಿತದ ಉಳಿದ ಕಾರ್ಯಗಳ ಕಡೆ ಗಮನ ಕೊಡುತ್ತಿದ್ದರು. ಆಗ ಶ್ರೀ ಕ್ಷೇತ್ರ ಮಲೇರಿಯ ರೋಗದ ಕೊಂಪೆಯಾಗಿತ್ತು. ಮಲೇರಿಯ ರೋಗ ನಿರ್ಮೂಲನ ವೆಂಬ ಮಹಾ ಸಮರ ಸಾರಿ ಪ್ರಕೃತಿಯನ್ನೇ ಗೆದ್ದರು.

ಹೊಂಡಗಳನ್ನು ಮುಚ್ಚಿಸಿ ಎಲ್ಲೆಲ್ಲೂ ಹಸಿರು ತೋಟಾ ಗಿಡಮರಗಳಿಂದ ಸ್ವಚ್ಛ ಹವೆ ಬರುವಂತೆ ಮಾಡಿ ಹೊಸದಾದ ಭಾವಿಗಳನ್ನೂ ತೋಡಿ ಅದರ ಸುತ್ತಮುತ್ತಲು ಶುಚಿಯಾದ ಪರಿಸರ ನಿರ್ಮಿಸಿದರು.

ಹೊಳೆಯಿಂದ ಶುದ್ಧೀಕರಿಸಿದ ನೀರು ಪೈಪುಗಳ ಮೂಲಕ ಹರಿದು ಬರುವಂತೆ ಮಾಡಿದರು, ಶುದ್ಧತ್ವವೇ ದೈವತ್ವ ಎಂಬ ಮಹತ್ವವನ್ನು ಚೆನ್ನಾಗಿ ತಿಳಿದ ಇವರು ತಮ್ಮ ಕಾರ್ಯಗಳ ಮೂಲಕ ಜನರಿಗೆ ಅದನ್ನು ಸಾರಿ ತೋರಿದರು.

ರೋಗಿಗಳಿಗೆ ಪ್ರತ್ಯೇಕ ಕೊಠಡಿಗಳೂ, ಉಚಿತ ಔಷಧೋಪಚಾರ ಹಾಗೂ ರೋಗ ಹರಡದಂತೆ ಮುನ್ನೆಚ್ಚರಿಕೆ ಕ್ರಮ ಈ ಎಲ್ಲಾ ವಿಧಿ ವಿಧಾನಗಳಿಂದಾಗಿ ಶ್ರೀ ಕ್ಷೇತ್ರ ಹಾಗೂ ಸುತ್ತಮುತ್ತಲ ಪ್ರದೇಶಗಳು ಆರೋಗ್ಯದ ಬೀಡಾದವು,

ಶ್ರೀ ಕ್ಷೇತ್ರದ ಉತ್ಪತ್ತಿ ಹೆಚ್ಚಿಸಬೇಕು. ಇದು ಅವರ ಮನದಲ್ಲಿ ಮೊದಲು ಮೊಳೆತ ವಿಚಾರ, ಶ್ರೀ ಕ್ಷೇತ್ರಕ್ಕೆ ಸೇರಿದ ಭೂಮಿ ಎಲ್ಲೆಲ್ಲಿದೆಯೆಂದು, ಮೊದಲು ದಾಖಲೆ ಸಮೇತ ಸಿದ್ಧಪಡಿಸಿಕೊಂಡು ಅಲ್ಲೆಲ್ಲಾ ರೈತರನ್ನು ಬಿಟ್ಟು ಬೇಸಾಯ ಮಾಡಿಸಿದರು.



ಶ್ರೀ ಕ್ಷೇತ್ರದ ಕೆಲವು ಪ್ರದೇಶಗಳಂತು ಬಂಜರು ಭೂಮಿಯಾಗಿತ್ತು, ಕೆಲವಾರು ವರ್ಷಗಳಿಂದ ಬೇಸಾಯ ಮಾಡದೆ ಕಾಡುಕಂಟಿಯಾಗಿ ಬಿದ್ದ ಕೆಲವು ಪ್ರದೇಶಗಳು. ಆಪ್ತರು .... ಇದು ಆಗದ ಕಾರ್ಯವೆಂದು ಹಿಂಜರಿದರೂ .... ಇವರು ಸಾಧಿಸಲೇ ಬೇಕೆಂದು ಸಂಕಲ್ಪ ತೊಟ್ಟರು.

ರೈತರಿಗೆ ವಸತಿ, ಆಹಾರ, ಬೀತ್ತುವ ಬೀಜ ಉಳುಮೆಗೆ ಎತ್ತು ತಾವೇ ನೀಡಿ ಅವರಿಗೆ ಹೊಲ ನೀಡಿದರು. ಮಾರ್ಗ ದರ್ಶನ ನೀಡಿದರು. ಮೊದಲು ನಾಲ್ಕಾರು ವರ್ಷ ಗೇಣಿ ಸಹ ಸ್ವೀಕರಿಸಲಿಲ್ಲ.

ಶ್ರೀಕ್ಷೇತ್ರದ ಬೇರೆ ಬೇರೆ ಕಡೆ ಅಡಿಕೆಯ ತೋಟ ತೆಂಗಿನ ತೋಟಾ, ಬಾಳೆ ತೋಟಾ ಮಾಡಿಸಿದರು. ಸುಂದರವಾದ ಉದ್ಯಾನವನಗಳನ್ನು ಬೆಳೆಸಿದರು. ಇವರ ಪ್ರತಿ ಕಾರ್ಯದ ಹಿಂದೆ ಶ್ರೀ ಮಂಜುನಾಥ ಸ್ವಾಮಿ ಇದ್ದ.

ದೈವಾನು ಗ್ರಹದಿಂದ ಸುವ್ವಲಾಲಿ
ಇವರು ಕೈಗೊಂಡ ಕಾರ್ಯಗಳೆಲ್ಲ ಜಯವಾಯ್ತು ಸುವ್ವಲಾಲಿ.
ಧರ್ಮದ ಬಲದಿಂದ ಸುವ್ವಲಾಲಿ
ಇವರ ಸಂಕಲ್ಪ ಫಲಿಸಿತು ಸುವ್ವಲಾಲಿ.

ಮಹಾ ಧರ್ಮಿಷ್ಠರಾದ, ದೈವ ಭಕ್ತರಾದ ಶ್ರೀ ಮಂಜಯ್ಯ ಹೆಗಡೆಯವರ ಎಲ್ಲಾ ಕಾರ್ಯಗಳೂ

ಎಲ್ಲಾ ಹೂವೆತ್ತಿದಂತೆ ಹಗುರಾಯಿತು. ಅವರ ಮನೋಬಲಕ್ಕೆ ಜಯವಾಯಿತು.

ಒಯಲು ಹಸುರಾಗಿತ್ತು ಸುವ್ವಲಾಲಿ
ಬಂಜರು ಫಲವತ್ತಾಯ್ತು ಸುವ್ವಲಾಲಿ
ಹರಿವ ನೇತ್ರವತಿ ಧಾರೆಯೊಡನೆ ಸುವ್ವಲಾಲಿ
ಹರುಷಧಾರೆ ಹರೆದಿತ್ತು ಸುವ್ವಲಾಲಿ

ದೀನ ದಲಿತರೆಂದರೆ, ಕಷ್ಟದಲ್ಲಿ ಸಿಲುಕಿದವರು ಎಂದರೆ ಶ್ರೀ ಮಂಜಯ್ಯ ಹೆಗಡೆಯವರ ಮನಸ್ಸು ಕರಗುತ್ತಿತ್ತು.

1923 ನೆ ಇಸವಿಯಲ್ಲಿ ದೊಡ್ಡ ನೆರೆಯ ಹಾವಳಿಯಿಂದ ಆ ವರ್ಷದ ಹೊಲಗಳು ಹಾಳಾಗಿ ಬೆಳೆ ಕೊಚ್ಚಿ ಕೊಂಡು ಹೋದವು, ರೈತರು, ಜನಸಾಮಾನ್ಯರು ಅನ್ನ ಆಹಾರಕ್ಕಾಗಿ ಹಾಹಾಕಾರ ಪಡುವಂತಾಯಿತು. ಇದೇ ಸಮಯದಲ್ಲಿ ಕೆಲವು ಕಳ್ಳಸಂತೆ ಲಾಭ ಕೋರರು ಸಿಕ್ಕಾ ಪಟ್ಟೆ ಬೆಲೆ ಏರಿಕೆ ಮಾಡಿ ಜನರನ್ನು ದೋಚ ತೊಡಗಿದರು, ಸಾಮಾನ್ಯವಾಗಿ ನ್ಯಾಯಬೆಲೆ ಮಾರಾಟವೇ ಮುಡಿಗೆ ಹದಿನಾರು ರೂಗಳಾಯಿತು.

ಬಡವರ ಕಷ್ಟ ಹಾಹಾಕಾರ ಗಮನಿಸಿದ ಶ್ರೀ ಮಂಜಯ್ಯ ಹೆಗಡೆಯವರು, ಮುಡಿಗೆ ಆರು, ಏಳು ರೂ ಕ್ರಯವಿಟ್ಟು ಅಕ್ಕಿ ವಿತರಿಸಿದರು, ಸಾವಿರಾರು ಜನಕ್ಕೆ ಎರಡು ಹೊತ್ತು ಉಚಿತ ಊಟ ಕೊಡುವ ಏರ್ಪಾಡು ಮಾಡಿದರು, ಹೀಗೆ ಕಷ್ಟಕ್ಕೆ ತುತ್ತಾದ ಜನರಿಗೆ ಉಪಕಾರ ಮಾಡುವುದರಲ್ಲಿ ಅವರು ಎತ್ತಿದ ಕೈ.

ಬೆಳೆದಿಂಗಳು ಸುರಿದಂತೆ ಸುವ್ವಲಾಲಿ
ಅವರ ಪರೋಕಾರಗಳು ಹರಡಿತ್ತು ಸುವ್ವಲಾಲಿ
ಸೂರ್ಯಕಿರಣ ಥಳಥಳಿಸಿದಂತೆ ಸುವ್ವಲಾಲಿ
ಅವರ ಸದ್ಗುಣ ಮೆರೆದು ವಿಜೃಂಭಿಸಿತ್ತು ಸುವ್ವಲಾಲಿ.

ಶ್ರೀ ಮಂಜಯ್ಯ ಹೆಗಡೆಯವರ ಕುಟುಂಬ ಜೀವನವೂ ಸುಂದರ ಸುಮಧುರ-ವಾಗಿತ್ತು. ಧರ್ಮಪತ್ನಿ ಲೋಕಮ್ಮ ಪತಿಗೆ ತಕ್ಕ ಸದ್ಗುಣ ಶಾಲಿಯಾಗಿದ್ದರು.

---

" ಎನ್ನ ಕುಲಸೂತಕವ ಕಳೆದಾತ ಬಸವಣ್ಣ,
ಎನ್ನ ಛಲಸೂತಕವ ಕಳೆದಾತ ಬಸವಣ್ಣ,
ಎನ್ನ ತನು ಸೂತಕವ ಕಳೆದಾತ ಬಸವಣ್ಣ,
ಎನ್ನ ಮನ ಸೂತಕವ ಕಳೆದಾತ ಬಸವಣ್ಣ,
ಎನ್ನ ಭಾವ ಸೂತಕವ ಕಳೆದಾತ ಬಸವಣ್ಣ,
ಎನ್ನ ಅಱಿಹು ಮಱಹಿನ ಸಂದು ಸಂಶಯವ ಬಿಡಿಸಿದಾತ ಬಸವಣ್ಣ,
ಎನ್ನ ತನ್ನೊಳಗೆ ಇಂಬಿಟ್ಟು ಕೊಂಡಾತ ಬಸವಣ್ಣ,
ನಿಜದ ನಿರ್ವಯಲ ಬಾಗಿಲ ನಿಜವ ತೋಱಿದಾತ ಬಸವಣ್ಣ,
ಬಸವಣ್ಣಪ್ರಿಯ ಚೆನ್ನಸಂಗಯ್ಯನ ಹೃದಯ ಕಮಲದಲ್ಲಿ
ನಿಜನಿವಾಸಿಯಾಗಿರಿಸಿದ ಎನ್ನ ತಂದೆ ಸಂಗನ ಬಸವಣ್ಣನು "

- ಬಸವಣ್ಣನವರು.

### ಬಸವ ಮಹಿಮೆ

' ಬಸವ ' ಎಂಬ ಮೂರಕ್ಷರ ಹೃದಯಕಮಲದಲ್ಲಿ ನೆಲೆಗೊಂಡಡೆ,
ಅಭೇಧ್ಯ ಭೇದ್ಯವಾಯಿತ್ತು; ಅಸಾಧ್ಯ ಸಾಧ್ಯವಾಯಿತ್ತು.
ಇಂತು ಬಸವಣ್ಣನಿಂದ ಲೋಕ ಲೌಕಿಕದ ಕುಭಾಷೆಯ ಕಳೆದು,
ಲೋಕಾಚರಣೆಯನತಿಗಳೆದು ಭಕ್ತಿ ಭರವಪ್ಪುದು,
ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನ ಕಾರುಣ್ಯದಿಂದ.

- ಚನ್ನಬಸವಣ್ಣ.

## ಶಿಕ್ಷಣಯೋಗಿ, ಡೆಪ್ಯೂಟಿ ಚನ್ನಬಸಪ್ಪನವರ ಕನ್ನಡ ಸೇವೆ.

ವಿ॥ ಜಿ ಬಿ. ಶಿವಸ್ವಾಮಿ, ನಂ. 2306 ಜ್ಞಾನಸದನ, ಆರ್.ಪಿ ಸಿ. ಬಡಾವಣೆ, 2ನೆ ಹಂತ
ವಿಜಯನಗರ, ಬೆಂಗಳೂರು-4011

ಕನ್ನಡ ನಾಡು ನುಡಿಯ ಅಭಿವೃದ್ಧಿಗಾಗಿ ಅನೇಕ ಮಹನೀಯರು ಶ್ರಮಿಸಿದ್ದಾರೆ. ಅವರುಗಳಲ್ಲಿ ಡೆಪ್ಯುಟಿ ಚನ್ನಬಸಪ್ಪನವರೂ ಒಬ್ಬರು. ಕನ್ನಡ ನಾಡು-ನುಡಿಯನ್ನು ಕಟ್ಟಿ ಬೆಳೆಸಿದವರ ಚರಿತ್ರೆಯನ್ನು ಇಂದಿನ ಯುವ ಪೀಳಿಗೆಗೆ ಪರಿಚಯ ಮಾಡಿ-ಕೊಡುವುದು, ಅವಶ್ಯಕವಾಗಿದೆ. ಮಹಾತ್ಮರ ಜೀವನದ ದರ್ಶನ ಒಂದು ಪುಣ್ಯಕರ. ಅವರು ತೀರ್ಥಕ್ಷೇತ್ರವಿದ್ದಂತೆ. ಆದರೆ ತೀರ್ಥಕ್ಷೇತ್ರ ಕಾಲದಲ್ಲಿ ಫಲವನ್ನು ಕೊಡುತ್ತದೆ. ಸತ್ಪುರುಷರ ಜೀವನ ಚರಿತ್ರೆಯನ್ನು ಅಭ್ಯಾಸ ಮಾಡಿದರೆ ಉತ್ತಮ ಗುಣ ಮತ್ತು ಕರ್ತವ್ಯ ಪ್ರಜ್ಞೆಗಳು ಜಾಗೃತಿಗೊಳ್ಳುತ್ತವೆ. ಕನ್ನಡ ನಾಡಿನ ಗಂಡು ಭೂಮಿಯಾದ ಧಾರವಾಡದಲ್ಲಿ ಕಾಯಕ ನಿರತರಾದ ಬಸವಲಿಂಗಪ್ಪ ಮತ್ತು ಶಂಣೆ ಶಿಪ್ಪವ್ವ ಇವರ ಗರ್ಭಸುಧಾಂಬುಧಿಯಲ್ಲಿ ಕನ್ನಡ ನುಡಿಯ ಅಭಿಮಾನವನ್ನು ಹುಟ್ಟುವಾಗಲೆ ಮೈಗೂ ಡಿಸಿಕೊಂಡು 1833 ರಲ್ಲಿ ಚನ್ನಬಸಪ್ಪನವರು ಜನಿಸಿದರು. ಹಿರಿಯರು ದೊಡ್ಡ ಬಸಪ್ಪನೆಂದ ನಾಮಕರಣ ಮಾಡಿ ಹರಸಿದರು ಆದರೆ ದೈವಲೀಲೆ ವಿಚಿತ್ರವಾಗಿತ್ತು.

ನಾಡಿನಲ್ಲಿ ಅನೇಕ ಮಕ್ಕಳು ಬಾಲ್ಯದಲ್ಲಿಯೇ ತಂದೆ ತಾಯಿಗಳನ್ನು ಕಳೆದು ಕೊಂಡು ಅನಾಥರಾಗುತ್ತಾರೆ. ಅವರ ಜೀವನ ಅನೇಕ ಕಷ್ಟಕಾರ್ಪಣ್ಯಗಳಿಗೆ ಸಿಕ್ಕಿ ಬಾಲ್ಯದಲ್ಲಿಯೇ ನಂದಿ ಹೋಗುತ್ತದೆ. ಕೆಲವು ಸಾಹಸಿಗಳು ತಮಗೆ ಬಂದ ಕಷ್ಟ ಕಾರ್ಪಣ್ಯಗಳನ್ನು ಧೈರ್ಯದಿಂದ ಎದುರಿಸಿ ತಮ್ಮ ಜೀವನ ಸಾಫಲ್ಯಕ್ಕಾಗಿ ಹೋರಾ ಡುತ್ತಾರೆ. ಅಂತಹ ಸಾಧಕರಲ್ಲಿ ಡೆಪ್ಯೂಟಿ ಚನ್ನಬಸಪ್ಪ ಹಸುಳೆಯಾಗಿದ್ದಾಗಲೇ ಇವರ ತಂದೆ ಬಸವಲಿಂಗಪ್ಪನವರು ಇಹಲೋಕವನ್ನು ತ್ಯಜಿಸಿದರು. ತಾಯಿ ಮತ್ತು ಮಗ ಅನಾಥರಾದರು. ಆ ತಾಯಿ ತನ್ನ ಮಗನಿಗಾಗಿ ಬಂದ ಕಷ್ಟಗಳನ್ನು ದಿಟ್ಟ ತನದಿಂದ ನಿವಾರಿಸಿಕೊಂಡು ಹಗಲಿರುಳು ಶ್ರಮಿಸಿ ತನ್ನ ಮಗನನ್ನು ಜೋಪಾನ ಮಾಡುತ್ತ ವಿದ್ಯಾವಂತನನ್ನಾಗಿ ನೂಡಲು ನಿರ್ಧರಿಸಿದರು. ಅಂದಿನ ಕಾಲದಲ್ಲಿ ಪ್ರತಿ ಯೊಂದು ಊರಿಗೂ ಶಾಲೆ-ಕಾಲೇಜುಗಳಿಲ್ಲ. ಮಗನ ವಿದ್ಯಾಭ್ಯಾಸವನ್ನು ಮಾಡಿಸಲು ಬಹಳ ಶ್ರಮ ಪಡಬೇಕಾಯಿತು, ಅಲ್ಲಲ್ಲಿ ಕೆಲವು ಗುರುಕುಲಗಳು, ಅಯ್ಯ ನವರ ಶಾಲೆ ಮಠಗಳಲ್ಲಿಯೇ ವಿದ್ಯಾಭ್ಯಾಸ ನಡೆಯುತ್ತಿತ್ತು. ಆ ಪ್ರದೇಶದಲ್ಲಿ ಶಾಲೆ ಮಠವನ್ನು ನಡೆಸುತ್ತಿದ್ದ ಶಿವರುದ್ರಯ್ಯನವರ ಬಳಿ ಚನ್ನಬಸಪ್ಪನನ್ನು ಕರೆದುಕೊಂಡು ಹೋಗಿ ಅಯ್ಯನವರೇ ಈ ನನ್ನ ಅನಾಥಮಗನಿಗೆ ಕೃಪೆಮಾಡಿ ವಿದ್ಯಾಭ್ಯಾಸ ಮಾಡಿಸಬೇಕು, "ಬಂಧುಗಳು ಆದವರು ಬಂದುಂಡು ಹೋಗು ವರು. ಬಂಧನವ ಕಳೆಯಲರಿಯರು ಗುರುವಿಂದ ಬಂಧುಗಳುಂಟೆ ಸರ್ವಜ್ಞ" ಎಂದು ಹೇಳಿದ್ದಾರೆ, ತಂದೆ ತಾಯಿಗಳಿಗಿಂತ ಗುರುಕರುಣೆ ಅವಶ್ಯಕವಾಗಿದೆ. ಆಚಾರ



ವಿಚಾರ ದೇಶಾಭಿಮಾನ, ಭಾಷಾಭಿಮಾನವನ್ನು ಬೋಧಿಸಿ ಈತನನ್ನು ವಿದ್ಯಾವಂತ ನನ್ನಾಗಿ ಮಾಡುವುದು ತಮ್ಮದು ಎಂದು ಹೇಳಿ ಗುರುಗಳ ಬಳಿ ಬಿಟ್ಟು ಹೋದರು.

ಶಾಲೆ ಮಠದ ಶ್ರೀ ಶಿವರುದ್ರಯ್ಯನವರು ಹಂತ ಹಂತವಾಗಿ ಚನ್ನಬಸಪ್ಪನ ಚುರುಕುತನ, ಕಲಿಕೆಯ ಆಸಕ್ತಿ, ಶ್ರದ್ಧೆ, ಯಾವುದನ್ನಾದರು ಸಾಧಿಸಬಲ್ಲೆನೆಂಬ ನಂಬಿಕೆಯನ್ನು ಗುರುತಿಸಿ ತಮ್ಮಲ್ಲಿ ಇರುವ ವಿದ್ಯೆಯನ್ನು ಬೋಧಿಸಿ ವಿದ್ಯಾಸಕ್ತ ನನ್ನಾಗಿ ಮಾಡಿದರು. ಕನ್ನಡ ಕಲಿಕೆಯ ಜೊತೆಗೆ ಮರಾಠಿ ಮತ್ತು ಗಣಿತವನ್ನು ಕಲಿಸಿಕೊಟ್ಟರು, ಹಳಗನ್ನಡದ ಕಾವ್ಯಗಳನ್ನು ಓದಿ ತಿಳಿಯುವ ಅಭಿರುಚಿ ಬೆಳೆಸಿ ಕೊಂಡರು, ಜೊತೆಗೆ ಅವರಲ್ಲಿ ಗಣಿತ ಮತ್ತು ಇಂಗ್ಲಿಷ್ ಭಾಷೆಯನ್ನು ಉನ್ನತ ಮಟ್ಟದಲ್ಲಿ ಅಭ್ಯಾಸಮಾಡುವ ಆಸಕ್ತಿ ಮೂಡಿತು. ಶಾಲೆ ಮಠದಲ್ಲಿ ಕೆಲವು ವರ್ಷ ಗಳು ಅಭ್ಯಾಸ ಮಾಡಿ ಮುಗಿಸಿದರು. ಶ್ರೀ ಶಿವರುದ್ರಯ್ಯ ಮಾಸ್ತರು ಉನ್ನತ ವ್ಯಾಸಂಗ ಮಾಡಲು ಚನ್ನಬಸಪ್ಪನಿಗೆ ಉತ್ತೇಜಿಸಿದರು. ಆಗಿನ ಕಾಲದಲ್ಲಿ ವ್ಯವ ಹಾರಗಳು ಪ್ರಾಂತೀಯ ಭಾಷೆಯ ಜೊತೆಗೆ ಇಂಗ್ಲೀಷ್‌ನಲ್ಲಿ ನಡೆಯುತ್ತಿದ್ದವು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಹೋಗಬೇಕೆಂಬ ಹಂಬಲ ಚನ್ನಬಸಪ್ಪನಿಗೆ. ಆದರೆ ಬಹುದೂರವಿರುವ ಪುಣೆಗೆ ಹಣವಿಲ್ಲದೆ ಹೇಗೆ ಹೋಗುವುದು ? ಬಡತನದ ಲ್ಲಿಯೇ ಜೀವನ ನಡೆಸುತ್ತಿದ್ದ ತಾಯಿಗೆ ಬಹುದೂರ ಸ್ವಾಧವಿರಲಿಲ್ಲ. ಬಂಧುಗಳನ್ನು ಭೇಟಿಮಾಡಿ ವಿದ್ಯಾಭ್ಯಾಸದ ಆಸಕ್ತಿಯನ್ನು ತೋರಿಕೊಂಡರು, ಅವರಿಂದಲೂ ನಿರುತ್ಸಾಹದ ಉತ್ತರ ಬಂತು. ಯಾರು ಅವರನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಲು ಮುಂದೆ ಬರಲಿಲ್ಲ. ಬಾಲಕ ಚನ್ನಬಸಪ್ಪನ ಉತ್ಸಾಹ ಮಾತ್ರ ನಿಲ್ಲಲಿಲ್ಲ. ಮಲಗಿದ್ದ ತಾಯಿಗೆ ಮನಸ್ಸಿನಲ್ಲಿಯೇ ವಂದಿಸಿ ತನ್ನ ತಂದೆಯ ಸ್ನೇಹಿತರಾದ ಗೋಕಾಕಿನ ಶ್ರೀ ನಾಗಪ್ಪಗಿರಿಯಪುರ ಇವರನ್ನು ಕಂಡು ತನ್ನ ಇಂಗಿತವನ್ನು ಹೇಳಿಕೊಂಡ. ಚನ್ನ ಬಸಪ್ಪನ ಶಿಕ್ಷಣಾಭಿರುಚಿಯನ್ನು ಕಂಡು ಸಂತೋಷದಿಂದ ಐವತ್ತು ರೂಗಳನ್ನು ಕೊಟ್ಟು ಪುಣೆಗೆ ಹೋಗಿ ಅಭ್ಯಾಸ ನೂಡಲು ಪ್ರೋತ್ಸಾಹ ನೀಡಿದರು, ಇದು ಅವರ ಜ್ಞಾನದ ಬಾಗಿಲನ್ನು ತೆರೆದಂತಾಯಿತು.

ಪುಣೆಗೆ ಕಾಲ್ನಡಿಗೆಯಲ್ಲಿಯೇ ಹೋಗಿ ಚನ್ನಬಸಪ್ಪ ಬ್ರಿಟಿಷ್ ಸರ್ಕಾರದಿಂದ ಮಾನ್ಯತೆಪಡೆದ ಇಂಗ್ಲೀಷ್ ಶಾಲೆಗೆ ಸೇರಿ ಅಭ್ಯಾಸವನ್ನು ಮುಂದುವರಿಸಿದರು. ಪುಣೆಯಲ್ಲಿ ಶ್ರೀ ಗೋವಿಂದರಾಯರ ಉದಾರ ನೆರವಿನಿಂದ ಹಂತ ಹಂತವಾಗಿ ಶಿಕ್ಷಣಪಡೆದರು. ಇಂಜಿನಿಯರಿಂಗ್ ಪರೀಕ್ಷೆಯಲ್ಲಿ ಮೇಲ್ದರ್ಜೆಯಲ್ಲಿಯೇ ಉತ್ತೀರ್ಣ ರಾದರು. ವಿದ್ಯಾರ್ಥಿಯ ಪ್ರತಿಭೆಯನ್ನು ಗುರುತಿಸಿದ ಆಡಳಿತ ಮಂಡಳಿಯವರು ಆ ಸಂಸ್ಥೆಯಲ್ಲಿಯೇ ಕೆಲಸಮಾಡಲು ಕೆಲವುಕಾಲ ಅವಕಾಶ ಮಾಡಿಕೊಟ್ಟರು. ಅನಂತರ ಚನ್ನಬಸಪ್ಪ ಪುಣೆಯಿಂದ ತಮ್ಮ ಹುಟ್ಟೂರಾದ ಧಾರವಾಡಕ್ಕೆ ಮರಳಿ

ಬಂದರು. "ಉದ್ಯೋಗಂ ಪುರುಷಲಕ್ಷಣಂ" ಎಂದು ತಿಳಿದು ಪ್ರಯತ್ನ ಮಾಡಿ ಸರ್ಕಾರಿ ಅಂಚೆ ಕಛೇರಿಗೆ ಕೆಲಸಕ್ಕೆ ಸೇರಿ ವ್ಯಕ್ತಿ ಜೀವನವನ್ನು ಪ್ರಾರಂಭಿಸಿ ತಾಯಿಗೆ ಸಮಾಧಾನತಂದರು.

**ಶಿಕ್ಷಣ ಯೋಗಿ:-** ಜನ ಸಾಮಾನ್ಯರ ಮಕ್ಕಳಿಗೆ ಶಿಕ್ಷಣ ನೀಡುವುದು ವಿದ್ಯಾ ಇಲಾಖೆ ಎಂದು ಭಾವಿಸಿ, ನಾರ್ಮಲ್ ಸ್ಕೂಲ್ ಪ್ರಾರಂಭಿಸಿದರು. ಈ ಶಿಕ್ಷಣ ಅಭಿಮಾನಿ ಸಮರ್ಥನೆಂದು ಸರ್ಕಾರದವರು ತಿಳಿದು ಮುಖ್ಯೋಪಾಧ್ಯಾಯರನ್ನಾಗಿ ನೇಮಿಸಿದರು. ವಿದ್ಯಾ ಇಲಾಖೆಯಲ್ಲಿ ಚನ್ನಬಸಪ್ಪನವರು ಸಾಧಿಸಿದ ಕಾರ್ಯಗಳು ಅಪಾರ. ಅನಕ್ಷರಸ್ಥರಾಗಿದ್ದ ಜನರನ್ನು ಅಕ್ಷರಸ್ಥರನ್ನಾಗಿ ಮಾಡುವ ಜವಾಬ್ದಾರಿಯನ್ನು ಹೊತ್ತು ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ಪರಿಚಯ ಮಾಡಿಕೊಂಡರು. ಈ ಪ್ರದೇಶ ಬ್ರಿಟಿಷರ ದೇಶಕ್ಕೆ ಬರುವ ಮೊದಲು ಧಾರವಾಡ, ಬೆಳಗಾವಿ ,ಕಾರವಾರ, ಬಿಜಾಪುರ ಜಿಲ್ಲೆಗಳನ್ನೊಳಗೊಂಡು ಕರ್ನಾಟಕ ಈ ಭಾಗವು ಮಹಾರಾಷ್ಟ್ರೀಯ ಪೇಶ್ವೆಯರ ಆಡಳಿತದಲ್ಲಿತ್ತು. ಇದನ್ನು ದಕ್ಷಿಣ ಮಹಾರಾಷ್ಟ್ರವೆಂದು ಕರೆಯುತ್ತಿದ್ದರು. ಪ್ರದೇಶ ಮತ್ತು ಜನತೆಯ ಭಾಷೆ ಕನ್ನಡವಾಗಿದ್ದರೂ ಅರಸರ ಭಾಷೆ ಮರಾಠಿಯಾದ್ದರಿಂದ ಆ ಭಾಷೆಯಲ್ಲಿಯೇ ಆಡಳಿತ ಮತ್ತು ಶಿಕ್ಷಣ ನಡೆಯುತ್ತಿತ್ತು.

ಧಾರವಾಡ ಮುಂತಾದ ಈ ಪ್ರದೇಶವನ್ನು ಬ್ರಿಟಿಷರು ವಹಿಸಿಕೊಂಡ ಮೇಲೆ ಬದಲಾವಣೆಗೆ ಅವಕಾಶಗಳು ಕಂಡು ಬಂದವು. ಮರಾಠಿಶಾಲೆಗಳು ಇರುವುದನ್ನು ಕಂಡು" ಇದು ತಪ್ಪು' ಈ ವಿಭಾಗದ ಜನರ ಭಾಷೆ ಕನ್ನಡ ಅವರ ಭಾಷೆಯಲ್ಲಿಯೇ ಶಾಲೆಗಳು ನಡೆಯಬೇಕೆಂದು ಧಾರವಾಡ ವಿಭಾಗದ ಅಸಿಸ್ಟೆಂಟ್ ಕಲೆಕ್ಟರ್‌ರಾಗಿದ್ದ (1831) ವಾಲ್ಟರ್ ಎಲಿಯಟ್‌ರವರು ಬ್ರಿಟಿಷ್ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ ಪರಿಣಾಮವಾಗಿ ಕನ್ನಡ ಶಾಲೆ ಪ್ರಾರಂಭಕ್ಕೆ ಅವಕಾಶ ದೊರೆಯಿತು. ಕನ್ನಡ ಪಠ್ಯ ಪುಸ್ತಕಗಳ ಅಭಾವ, ಶಿಕ್ಷಣ ಕೊರತೆ, ನೇಮಕಾತಿಯ ಜಟಿಲತೆಗಳನ್ನು ಮನಗೊಂಡ ಚನ್ನಬಸಪ್ಪನವರು ಪಾಠಕ್ರಮ ಮತ್ತು ಪರೀಕ್ಷೆಗಳನ್ನು ಸಮರ್ಪಕವಾಗಿ ನಡೆಸಿ ಜನರಲ್ಲಿ ಆಸಕ್ತಿ ಬೆಳೆಸಿ ಕನ್ನಡಿಗರಲ್ಲಿ ತಮ್ಮ ತಮ್ಮ ಮಾತೃ ಭಾಷೆಯಲ್ಲಿ ಅರಿವನ್ನು ಮೂಡಿಸಿ ಕನ್ನಡ ಶಾಲೆಗಳ ಅರುಣೋದಯಕ್ಕೆ ಕಾರಣರಾದರು.

ಮರಾಠಿಯ ಶಿಕ್ಷಣ ಕಲಿಯಲು ಪ್ರೇರಣೆ ನೀಡಿದರು. ಕನ್ನಡ ಮಕ್ಕಳು ಬಲವಂತವಾಗಿ ಮರಾಠಿ ಕಲಿಯುವುದನ್ನು ಗುರುತಿಸಿದ ಚನ್ನಬಸಪ್ಪನವರು ಚಾಣಾಕ್ಷತನದಿಂದ ಅಲ್ಲಲ್ಲಿ ಸಂಚರಿಸಿ ವಿದ್ಯಾರ್ಥಿಗಳೊಂದಿಗೆ ಆತ್ಮೀಯ ಸಂಪರ್ಕ ಬೆಳೆಸಿಕೊಂಡು ಕನ್ನಡ ಇಂಗ್ಲೀಷ್ ಕಲಿಯಲು ಆಸಕ್ತಿ ಮೂಡಿಸಿದರು. ಧಾರವಾಡ ಕಾರವಾರ, ಬಿಜಾಪುರ, ಪುಣೆ, ಮತ್ತು ಮುಂಬೈ ನಗರಗಳಲ್ಲಿ ಹೊಸ ಸಾಮಾಜಿಕ ಚಟುವಟಿಕೆಗಳ ಅರಿವು ಮೂಡಿಸಿ ವಿದ್ಯಾರ್ಥಿಗಳ ಮನಸ್ಸನ್ನು ಗೆದ್ದು ಕೊಂಡರು. ಅವರ ಪ್ರಾಮಾಣಿಕ ಪ್ರಯತ್ನ ದಕ್ಷತೆಯ ಕುರುಹು ಎನ್ನಬಹದು.



ಕನ್ನಡ ಮಕ್ಕಳಲ್ಲಿ ತನ್ನ ತಾಯಿ ಭಾಷೆಯ ಮುಖೇನ ಕಲಿಯಬೇಕು. ನಮ್ಮ ಸಂಸ್ಕೃತಿಯನ್ನು ಮಾತೃ ಭಾಷೆಯ ಮುಖೇನ ಬೆಳೆಸಬೇಕು. ನಮ್ಮ ಭಾಷೆಯಲ್ಲಿ ಅಮೂಲ್ಯ ಪ್ರಾಚೀನ ಗ್ರಂಥಗಳ ರಾಶಿ ಇದೆ. ಅವುಗಳ ಜ್ಞಾನವನ್ನು ತಿಳಿದು ನಾಡನ್ನು ಬೆಳಗಿಸಬೇಕು ಎಂಬ ಸ್ವಾಭಿಮಾನ ಮೂಡಿಸಿದರು.

ಅವರಿಂದ ಶಾಲೆಗೆ ಶಿಕ್ಷಕರಾಗಿ ಬಂದಶ್ರೀ ಗಂಗಾಧರ ಮಡಿವಾಳೇಶ್ವರ ತುರಿಮರಿಯವರು ಮತ್ತು ಶ್ರೀ ಚುರುಮುರಿ ಶೇಷಗಿರಿರಾಯರು, ಚನ್ನಬಸಪ್ಪನವರ ದೇಶ ಪ್ರೇಮ, ಕನ್ನಡ ಪ್ರೇಮವನ್ನು ಕಂಡು ಕನ್ನಡ ಪುಸ್ತಕಗಳನ್ನು ರಚಿಸಿಕೊಟ್ಟರು, ಪುಸ್ತಕದ ಪ್ರಕಟಣೆಗೆ ಚನ್ನಬಸಪ್ಪನವರು ತನು,ಮನ, ಧನಗಳನ್ನು ಧಾರೆಯರೆದು ಅವರ ಪ್ರಯತ್ನದಿಂದ ಅನೇಕ ಕೃತಿಗಳು ಭಾಷಾಂತರವಾದವು, ಕೆಲವು ಹೊಸದಾಗಿ ರಚಿತಗೊಂಡು ಕನ್ನಡ ಸಾಹಿತ್ಯ ಬೆಳವಣಿಗೆಯಾಯಿತು.

**ಪ್ರಾಚಾರ್ಯರು :-**

1864 ರಲ್ಲಿ ದಕ್ಷಿಣಭಾಗಕ್ಕೆ ವಿಲಿಯಂ ಅಲೆನ್‌ರೆಸಲ್ ಎಂಬುವರು ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿಯಾಗಿ ಬಂದರು, ಅವರು ಮರಾಠಿಯ ವ್ಯಾಮೋಹವನ್ನು ಕಟುವಾಗಿ ಟೀಕಿಸಿ ಮಾತೃ ಭಾಷೆಯಲ್ಲಿ ಶಿಕ್ಷಣ ನೀಡಬೇಕೆಂದು ಆದೇಶ ಹೊರಡಿಸಿ ಇಪ್ಪತ್ತು ವರ್ಷಗಳ ಕಾಲ ಕನ್ನಡದ ಸ್ಥಾನಮಾನಸುಭದ್ರಗೊಳಿಸಿದರು, ಆಗ ಇದ್ದ ನಾರ್ಮಲ್ ಸ್ಕೂಲ್, ಕನ್ನಡ ಶಿಕ್ಷಕರ ಟ್ರೈನಿಂಗ್ ಕಾಲೇಜ್ ಆಗಿ ಪರಿವರ್ತನೆಯಾಯಿತು, ಚನ್ನಬಸಪ್ಪನವರು ಪ್ರಥಮ ಪ್ರಿನ್ಸಿಪಾಲ್‌ರಾಗಿ ಬಂದು ಕನ್ನಡದ ಬೆಳವಣಿಗೆಗೆ ಕಾರಣರಾದವರು, ಅವರ ಕನ್ನಡ ಅಭಿಮಾನ, ಶಿಸ್ತು, ಆಡಳಿತ ನಿಪುಣತೆ ಜನಪ್ರಿಯವಾದವು, ಶಿಕ್ಷಣ ಕ್ಷೇತ್ರದ ಪ್ರಸಾರಕ್ಕಾಗಿ ಮಠ ಪತ್ರಿಕೆ (ಶಾಲಾಪತ್ರಿಕೆ) ಯನ್ನು ಪ್ರಾರಂಭಿಸಿ ಅಧ್ಯಾಪಕರ, ವಿದ್ಯಾರ್ಥಿಗಳ ಲೇಖನ ಕಲೆಗೆ ಪ್ರೋತ್ಸಾಹಿಸಿದ್ದು ಸ್ವಾಗತಾರ್ಹವಾದ ಕಾರ್ಯ.

**ಡೆಪ್ಯೂಟಿ ಇನ್ಸ್‌ಪೆಕ್ಟರ್ ಸೇವೆ:-**

ದಕ್ಷತೆ ಮತ್ತು ಪ್ರಾಮಾಣಿಕನತದಿಂದ ಮರುವರ್ಷವೇ ಡೆಪ್ಯೂಟಿ ಎಜುಕೇಷನಲ್ ಇನ್ಸ್‌ಪೆಕ್ಟರ್ ಹುದ್ದೆಯನ್ನು ವಹಿಸಿಕೊಂಡರು. ಸುಮಾರು ಹದಿನೈದು ವರ್ಷಗಳು ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಶಿಕ್ಷಣದ ಸರ್ವೋತೋಮುಖ ಅಭಿವೃದ್ಧಿಗೆ ಶ್ರಮಿಸಿದ ಮಹಾನುಭಾವ ಇವರು,

ತಾವು ಡೆಪ್ಯೂಟಿ ಇನ್ಸ್‌ಪೆಕ್ಟರ್ ಹುದ್ದೆಗೆ ಬಂದಕೊಡಲೆ ಇಲಾಖೆ ಶರವೇಗದಲ್ಲಿ ಚಲಿಸತೊಡಗಿತು. ವಿದ್ಯಾರ್ಥಿಗಳಲ್ಲಿ ಶಿಸ್ತು ಭಾಷಭಿಮಾನ ಬೆಳೆಯುವಂತೆ ಮಾಡಿದರು. ಕನ್ನಡ ಸಂಸ್ಕೃತಿ ಬೆಳವಣಿಗೆಗೆ ಉತ್ತೇಜನ ನೀಡಿದರು, ಕನ್ನಡವನ್ನು ಆಡಳಿತ ಕ್ಷೇತ್ರದಲ್ಲಿ ಬಳಕೆಗೆ ತರಲು ಅಸಹಕಾರ ನೀಡಿದವರನ್ನು ಕರೆಸಿ ವಿವೇಕ ಹೇಳಿದರು. ಆಜ್ಞೆಯನ್ನು ಉಲ್ಲಂಘಿಸಿದವರಿಗೆ ಬಡ್ತಿ ತಡೆಹಿಡಿದರು. ವೇತನದಲ್ಲಿ ಕಡಿತ ಮಾಡಿದರು, ಚೆನ್ನ ಬಸಪ್ಪನವರ ಪ್ರಾಮಾಣಿಕತೆಗೆ ಎಲ್ಲರೂ ಮನಸೋತು. ತಾವು ಪ್ರಮಾಣಿಕತೆಯ ಕಡೆ ಒಲವು ತೋರಿದರು, ಶಿಕ್ಷಕರಿಗೆ ಕನ್ನಡ ದೀಕ್ಷೆಯನ್ನು ಕೊಟ್ಟ ಪ್ರಥಮ ಶಿಕ್ಷಣಯೋಗಿ ಚನ್ನಬಸಪ್ಪನವರು.

ಹಸಿದ ಹೊಟ್ಟೆಗೆ ಶಿಕ್ಷಣ ನೀಡಿದರೆ ಭೂಮಿಗೆ ಜಳ್ಳು ಬೀಜ ಬಿತ್ತಿದಂತೆ. ಅನ್ನ ನೀಡಿ ಶಿಕ್ಷಣ ನೀಡಬೇಕೆಂದು ಭಾವಿಸಿ ಬೆಳಗಾವಿಯ ವಿದ್ಯಾಪ್ರೇಗಳಾದ ಶ್ರೀ ಹರಬಾಳ ರುದ್ರಗೌಡರು. ಮತ್ತು ಶ್ರೀ ಗಿಲಗುಜ್ಜಿರುದ್ರಪ್ಪ ಇವರ ನೆರವಿನಿಂದ ಬೆಳಗಾವಿಯ-ಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ತೆಗೆದು ವಿದ್ಯಾರ್ಥಿಗಳ ಅಭ್ಯಾಸಕ್ಕೆ ಅನುಕೂಲ ಮಾಡಿದ ವಿದ್ಯಾಪ್ರೇಮಿ ಚನ್ನಬಸಪ್ಪನವರು.

**ಶಿಕ್ಷಣ ಪ್ರಸಾರ:–**

ಗ್ರಾಮಾಂತರ ಪ್ರದೇಶದ ಮಣ್ಣಿನ ಮಕ್ಕಳು ಸ್ವಶೀಕ್ಷಿತರಾದರೆ ದೇಶ ಮತ್ತು ಸಮಾಜದ ಪ್ರಗತಿ ಎಂದು ಅರಿತ ಚನ್ನಬಸಪ್ಪನವರ ಭಗೀರಥ ಪ್ರಯತ್ನಗಳ ಫಲವಾಗಿ ಕನ್ನಡ ಶಿಕ್ಷಣ ಪ್ರಸಾರವಾಯಿತು ಗ್ರಾಮ, ಹೋಬಳಿ, ತಾಲ್ಲೂಕುಗಳಲ್ಲಿ ಹೋದ ಹೋದ ಕಡೆಗಳಲ್ಲಿ ಊರಿನ ನಾಗರೀಕರನ್ನು ಕರೆಯಿಸಿ ಶಿಕ್ಷಣದ ಮಹತ್ವವನ್ನು ಬೋಧಿಸ ತೊಡಗಿದರು. ಇವರ ಸತತ ಪರಿಶ್ರಮ ಆಸಕ್ತಿಯಿಂದ ಧಾರಾವಾಡ ಜಿಲ್ಲೆಗಳಲ್ಲಿ ಹೆಚ್ಚು ಕನ್ನಡಶಾಲೆಗಳು ಆರಂಭಿಸಲ್ಪಟ್ಟವು, 1855–56 ರಲ್ಲಿ ಬೆಳಗಾವಿ' ವಿಜಾಪುರ, ಧಾರಾವಾಡ, ಜಿಲ್ಲೆಗಳಲ್ಲಿ ಅನುಕ್ರಮವಾಗಿ 13. 9, 12, ಕನ್ನಡ ಶಾಲೆ ಗಳಿದ್ದವು, 1882 ರಲ್ಲಿ ಕನ್ನಡ ಶಾಲೆಗಳ ಸಂಖ್ಯೆ ಅನುಕ್ರಮವಾಗಿ 166, 150, 341ಕ್ಕೆ ಏರಿತು. ವಿದ್ಯಾರ್ಥಿಗಳ ಸಂಖ್ಯೆ 55 ಸಾವಿರಕ್ಕೆ ಏರಿಸಿದ ಕೀರ್ತಿ ಶಿಕ್ಷಣ ಯೋಗಿ ಚನ್ನಬಸಪ್ಪನವರಿಗೆ ಸಲ್ಲುತ್ತದೆ. ಕನ್ನಡ ಪುಸ್ತಕಗಳ ಕೊರತೆಯನ್ನು ನಿವಾರಿಸಲು ತಾವೇ ಕೆಲವು ಪುಸ್ತಕಗಳನ್ನು ಬರೆದು ಪ್ರಕಟಿಸಿದರು. ಕೆಲವು ಪುಸ್ತಕಗಳನ್ನು ಕನ್ನಡ ಪಂಡಿತರಿಂದ ಬರೆಸಿ ಇಲಾಖೆಯ ನೆರವಿನಿಂದಲೂ ತಮ್ಮ ಸ್ವಂತ ಹಣದಿಂದಲೂ ಪ್ರಕಟಿಸಿ ಕನ್ನಡ ಪುಸ್ತಕಗಳ ಕೊಂತೆಯನ್ನು ನಿವಾರಣೆ ಮಾಡಿದರು, ಒಟ್ಟನಲ್ಲಿ ಕನ್ನಡ ವಿದ್ಯಾಭ್ಯಾಸ ಪ್ರಸಾರವಾದದ್ದು ಕನ್ನಡ ಸಾಹಿತ್ಯ ಬೆಳೆದಿದ್ದು ಶಿಕ್ಷಣಯೋಗಿ ಚನ್ನಪ್ಪ ನವರ ತಪಸ್ಸಿನ ಫಲವೆಂದು ಹೇಳಬಹುದು. ಇಂಥಾ ಕನ್ನಡದ ಅಭಿಮಾನಿ ಮತ್ತೊಮ್ಮೆ ಹುಟ್ಟಿ ಬಂದು ಕನ್ನಡ ನಾಡು–ನುಡಿಯನ್ನು ಬೆಳಗಿಸಲಿ.



# ಗ್ರಾಮಾಂತರ ಬಸವ ಜಯಂತಿ–264

ಹೆಚ್. ವಿ. ವೀರಭದ್ರಯ್ಯ.

ಆತ್ಮೀಯ ಶರಣಬಂಧು,

ಕಡೂರು ತಾಲ್ಲೂಕಿನಿಂದ ಮಾಗಡಿ ತಾಲ್ಲೂಕಿಗೆ ಬಸವ ಜಯಂತಿ ಮಣಿಹದ ಪ್ರಯಾಣ. 21-6-91 ರಂದು ರಂಗೇನಹಳ್ಳಿ ಪುಣ್ಯ ಗ್ರಾಮದಲ್ಲಿ ಆಚರಣೆ. ಗ್ರಾಮ ಪುಟ್ಟದು. ಗ್ರಾಮ ಬಂಧುಗಳ ಮನಸ್ಸು ದೊಡ್ಡದು. ಯುವಕರ ಪಾತ್ರ ಶ್ಲಾಘ ನೀಯ. ಬಸವೇಶ್ವರ ಯುವಕ ಸಂಘದ ಶಕ್ತಿ ಮೀರಿದ ಪ್ರಯತ್ನ. ಸುಮಾರು ಮೂರು ಲಕ್ಷರೂಗಳ ಬಸವೇಶ್ವರ ದೇವಾಲಯದ ಜೀರ್ಣೋದ್ಧಾರದ ಕೆಲಸ. ಎತ್ತರವಾದ ಸ್ಥಳ. ದೇವಾಲಯವಿರುವ ಜಾಗಎತ್ತರವಾಗಿ ಬೆಳೆದು ತೋರಿಸಬೇಕೆಂಬ ಯುವ ಮನಸ್ಸುಗಳ ಉತ್ಸಾಹ.

ಜನಸಾಮಾನ್ಯರಿಗೆ ಬಸವಣ್ಣನವರ ಹೆಸರು ಮಂತ್ರವಾಗಿದೆ. ಬಸವಣ್ಣ ಕಲಿಸಿದ್ದು 'ಉತ್ತು ಬಿತ್ತುವ ಮಂತ್ರ, ಬಿತ್ತಿ ಬೆಳೆಯುವ ಮಂತ್ರ ಮರ್ತ್ಯ ದೊಳು ಮಂತ್ರ ಜೀವನಕೆ–' ಎಂದು ಹಾಡಿದ್ದಾರೆ ಜನಪದರು ಬಸವಣ್ಣ ಬೋಧಿಸಿದ್ದು ಸ್ವರ್ಗ, ನರಕಗಳ ಪಾಪ ಪುಣ್ಯಗಳ, ಪ್ರಾಯಶ್ಚಿತ್ತ–ಪಶ್ಚಾತ್ತಾಪಗಳ ಮಂತ್ರವನ್ನಲ್ಲ. ದುಡಿದು ತಿನ್ನುವ, ಮರ್ತ್ಯದಲ್ಲಿ ಜೀವನಕ್ಕೆ ಅಗತ್ಯವಾದ ಮಂತ್ರವನ್ನೂ ಎಂಬುದಾಗಿನುಡಿ ಯುತ್ತ ಸಮಾರಂಭವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಬೆಂಗಳೂರಿನ ಬೇಲಿಮಠದ ಪೂಜ್ಯ ಶ್ರೀಗಳಾದ ಶಿವರುದ್ರಸ್ವಾಮಿಗಳು ನುಡಿದರೆ ಮುತ್ತಿನ ಹಾರದಂತಿರಬೇಕು ' ಎಂಬ ಬಸವಣ್ಣನವರ ಮಾತನ್ನು ನಡೆಯಲ್ಲಿ ಅಳವಡಿಸಿ ಕೊಂಡು ಸೇವಾ ಮಣಿಹದಲ್ಲಿ ಸಾಗಿರುವ ಸಿದ್ಧಗಂಗಾ ಪೂಜ್ಯ ಶ್ರೀಗಳು ಮಠಾಧಿಪ ತಿಗಳಿಗೆ ಆದರ್ಶವಾಗಿದ್ದಾರೆ, ಆಶಾದೀಪವಾಗಿದ್ದಾರೆ ಎಂದು ಅಧ್ಯಕ್ಷತೆವಹಿಸಿದ್ದ ಕನಕ ಪುರದ ದೇಗುಲ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಹೇಳಿದರು.

ಸಂಕಲ್ಪ ಸಾಕಾರಗೊಂಡ ಸಮಾರಂಭವೆಂದು ತಮಗಾದ ಸಂತೋಷವನ್ನು ವ್ಯಕ್ತಪಡಿಸುತ್ತ ಪರಮ ಪೂಜ್ಯ ಶ್ರೀ ಶ್ರೀ ಗಳು ಸೃಷ್ಟಿವರ್ಗದಲ್ಲಿ ಶ್ರೇಷ್ಠ ಜೀವಿಯಾದ ಮಾನವ "ಕ್ರಮ ತಪ್ಪಿ ನಡೆ" ದಿದ್ದು ಭೂಮಿಯ ಮೇಲಿನ ಬದುಕುನರಕ ಸದೃಶ ವಾಗಿದೆ ಧರ್ಮ ರಹಿತವಾದ ಬಾಳು ಎಲ್ಲ ಗೋಳಿಗೆ ಕಾರಣವಾದುದು. ಪಶು, ಪಕ್ಷಿ, ಪ್ರಾಣಿ, ಸಸ್ಯ, ಕ್ರಿಮಿ, ಕೀಟ, ಬೆಂಕಿ, ನೀರು, ಗಾಳಿ, ಮುಂತಾದುವುಗಳೆಲ್ಲ ಸ್ವಧರ್ಮ ಬಿಟ್ಟು ನಡೆದಿಲ್ಲ. ಆದರೆ ಮನುಷ್ಯ ಮಾತ್ರ ಅಧರ್ಮಿಯಾಗಿದ್ದಾನೆ. ಕ್ರಮ ತಪ್ಪಿ ನಡೆ ಯುತ್ತಿದ್ದಾನೆ "ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ಅದು

ಜಗಕಿಕ್ಕಿದವಿಧಿ, ನಿನ್ನೊಡವೆಯೆಂಬುದು ಜ್ಞಾನರತ್ನ" ಎಂಬುದನ್ನು ಅರಿತು ಜೀವಿಸು ತ್ತಿದ್ದಾನೆ-ಎಂಬುದಾಗಿ ಆಶೀರ್ವಚನ ಮಾಡುತ್ತ ಧರ್ಮ ಕೆಲವೇ ಜನರ ಸ್ವತ್ತಾಗಿದ್ದು ದನ್ನು ಮನಗಂಡು ಬಸವಣ್ಣನವರು ಅದನ್ನು ಜನಸಾಮಾನ್ಯರಿಗೆ ಲಭ್ಯವಾಗುವಂತೆ ಮಾಡುವ ಮಹಾ ಪ್ರಯತ್ನದಲ್ಲಿ ತಮ್ಮನ್ನೇ ಅರ್ಪಿಸಿಕೊಂಡರು. ಎಲ್ಲರನ್ನು ತನ್ನಂ- ತೆಯೆ ಕಾಣುವ ಭಾವಲೋಕ ನಿರ್ಮಾಣ ಮಾಡಿದರು. ಪರಸ್ಪರ ಪ್ರೇಮದಿಂದ ಬಾಳುವ ಕಲೆಯನ್ನು ಕಲಿಸಿದರು. ಪರಿಶುದ್ಧ ಪ್ರಾಪಂಚಿಕ ಪ್ರಜ್ಞಾವಂತರಾದ ಬಸವಣ್ಣ ನವರು ಧರ್ಮದ ಬುನಾದಿಯ ಮೇಲೆ ವ್ಯಕ್ತಿ ಬಾಳುವುದನ್ನು ಕಲಿಸಿಕೊಟ್ಟರು. ಮನುಷ್ಯ ತನಗಿರುವ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ತಪಶ್ಶಕ್ತಿಗಳ ಸದುಪಯೋಗ ಮಾಡಿ ಕೊಳ್ಳುವ ಕಲೆಗಾರನಾಗಬೇಕು ಎಂದರು.

ದ್ವಿತೀಯ ಅಧಿವೇಶನದಲ್ಲಿ ಮುಖ್ಯ ಉಪನ್ಯಾಸಕರಾಗಿ ಆಗಮಿಸಿದ್ದ ಪ್ರಸಿದ್ಧ ಸಾಹಿತಿಗಳಾದ ಡಾ॥ಸಿದ್ಧಯ್ಯ ಪುರಾಣಿಕ "ಸುಲಿಗೆಗಾರರಿಂದ ಜನಸಾಮಾನ್ಯರನ್ನು ಮುಕ್ತ ಮಾಡಿದ ಬಸವಣ್ಣ ಮನುಕುಲದ ಮಂಗಳ ಸೂರ್ಯನೆನ್ನುತ್ತ ರಾಜನೇ ವಿಷ್ಣು ವೆಂದು ದೇಶದಲ್ಲಿ" ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕೆ ಕೊಂಬರಯ್ಯ, ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬರಿಲ್ಲ" ಎಂಬ ಕೆಚ್ಚಿನ ಮಾತನ್ನಾಡಿದ ಹುಟ್ಟು ಹೋರಾಟಗಾರನೆಂದರು.

ಬರೀ ಉಣ್ಣುವ ತಿನ್ನುವ ತೊಡುವ ಇಡುವ ಕೆಡುವ ಸಾಯುವ ಚಿಂತೆಯಲ್ಲಿ ರುವಾಗ ಪರಮಾತ್ಮನ ಸ್ಮರಣಾವಕಾಶಮಾಡಿ ಕೊಟ್ಟಿರುವ ಸಿದ್ಧಗಂಗೆಯ ಪರಮಪೂಜ್ಯ ಶ್ರೀ ಶ್ರೀಗಳು ಬಸವಣ್ಣನವರ ಸಂದೇಶವನ್ನು ಮಳೆ ಗಾಳಿ ಬಿಸಿಲು ಬೇಗೆ ಹಗಲು ರಾತ್ರಿಗಳೆನ್ನದೆ ಹಳ್ಳಿಯ ಬಂಧುಗಳಿಗೆ ಮುಟ್ಟಿಸುವ ಮಹಾ ಯಾತ್ರೆಯಲ್ಲಿ ಪಾಲ್ಗೊ ಳುವುದೇ ಬದುಕಿನ ಸಾರ್ಥಕತೆ ಎಂದು ಕೊಂಡಿರುವ ನನಗೆ ಎನ್ನುತ್ತ ಡಾ॥ಸಾ.ಶಿ ಮರುಳಯ್ಯನವರು ಬಸವಣ್ಣನವರು ಅವತಾರ ಪುರುಷರಲ್ಲ. ವೀರಶೈವ ಸಿದ್ಧಾಂತಕ್ಕೆ ಅವತಾರದ ಕಲ್ಪನೆ ವಿರೋಧಿಯಾದುದು ಎಂಬುದಾಗಿ ವಿಶ್ಲೇಷಿಸುತ್ತ ಶಿಖರ ಗಾಮಿಯಾದ ಬಸವಣ್ಣ ಜನ ಸಾಮಾನ್ಯರ ಕಡೆಗೆ ದೃಷ್ಟಿಹರಿಸಿದುದನ್ನು ವಿವರಿಸು ವುದರೊಂದಿಗೆ ಬಸವಪೂರ್ವದಲ್ಲಿದ್ದ ರಾಜಕೀಯ ಹಿನ್ನೆಲೆಯನ್ನು ಚಿತ್ರಿಸಿದರು. ಬಸವಣ್ಣನವರ ಕಾಲದಲ್ಲಾದ ರಾಜಕೀಯ ಏಳುಬೀಳುಗಳ, ತಂತ್ರಕುತಂತ್ರಗಳ ಎಳೆ ಬಿಡಿಸಿ ಬಸವಣ್ಣ ಬಿಜ್ಜಳನ ಕೊಲೆಗೆ ಕಾರಣರಲ್ಲವೆಂಬುದನ್ನು ಸ್ಪಷ್ಟ ಪಡಿಸಿದರು.

ನಿರ್ಮೋಹ ಭಾವದಿಂದ ಕೂಡಿದ ಸಮಾಜ ನಿರ್ಮಾಣ ಮಾಡಿದ ಬಸವಣ್ಣ ಹಾವಿಗೆ, ಉರಿಗೆ, ಸುರಗಿಗೆ ಅಂಜದವರು ಪರಧನ, ಪರಸ್ತ್ರೀಗೆ ಅಂಜಿದ ನೀತಿನಾಣ್ಯ



ವಾಗಿದ್ದರು. ಪರವಧುವನ್ನು ಮಹಾದೇವಿಯೆಂದು ಗೌರವಿಸಿದರು. ಸ್ತ್ರೀಯರ ಬದುಕಿಗೆ ಬೆಳಕಾಗಿ ಬಂದರು ಎನ್ನುತ್ತ ಶ್ರೀಮತಿ ಬಿ. ಗಂಗಾಂಬಿಕೆಯವರು ಧರ್ಮ- ದೀಪಕರ ಜೀವನ ಚರಿತ್ರೆಯನ್ನು ಅಧ್ಯಯನ ಮಾಡದಂಥ ಮಹಾ ಅಪರಾಧದ ದೆಸೆಯಿಂದಾಗಿ ರಾಷ್ಟ್ರದ ಪ್ರಧಾನಿಯನ್ನೇ ಹತ್ಯೆಗೈಯ್ಯುವಂಥ ಮಹಾಪಾಪಕ್ಕೆ ಸ್ತ್ರೀಯರಿಂದ ನಡೆದಿರುವುದನ್ನು ಕಂಡಾಗ ಎತ್ತ ಸಾಗಿದ್ದೇವೆ ಹೆಣ್ಣು ಮಕ್ಕಳು ಎಂಬ ದಿಗಿಲಾಗುತ್ತದೆ ಎಂದು ಬಸವಸಂದೇಶ ನಮಗೆ ಸಂಸ್ಕಾರ ನೀಡಬಲ್ಲುದು ಎಂಬ ಭರವಸೆಯ ಮಾತುಗಳನ್ನಾಡಿದರು.

ಬಸವಣ್ಣನವರ ಜೀವನವೇ ಒಂದು ಬೃಹತ್ ಕಾವ್ಯ. ಅದರಲ್ಲಿ ಜಾನಪದ ಸತ್ವವನ್ನು ತುಂಬಿಕೊಂಡ ಮಹಾಕಾವ್ಯ ಎನ್ನುತ್ತ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಬಸವಣ್ಣನವರು ಬರೆದ ಕಾವ್ಯಗಳಿಗಿಂತ ಬದುಕಿದ ಬಾಳು ಶ್ರೇಷ್ಠವಾಗಿತ್ತು ಎಂಬು ದನ್ನು ಜನಪದಕವಿಗಳು ಮುಕ್ತಕಗಳಿಂದ ಹಾಡಿ ತೋರಿಸಿದರು.

ಸಮಾರಂಭದಲ್ಲಿ ಕುಮಾರಿ ಶಶಿಕಲಾ ಪುಟ್ಟಬಾಯಿಂದ ಬಸವ ತತ್ವಗಳನ್ನು ಸ್ಫುಟವಾಗಿ ನುಡಿದುದನ್ನು ಕಂಡ ಗ್ರಾಮೀಣ ತಾಯಿಯೊಬ್ಬಳು ಮೆಚ್ಚುಗೆಯಾಗಿ ಹತ್ತು ರೂಪಾಯಿ ಕೊಟ್ಟಾಗ ಆ ಹತ್ತು ರೂಪಾಯಿಗಳನ್ನು ಸಿದ್ಧಗಂಗಾ ಪರಮ ಪೂಜ್ಯ ಶ್ರೀ ಶ್ರೀ ಗಳವರ ಚರಣಗಳಿಗೆ ಅರ್ಪಿಸಿ ಸಂತೋಷಗೊಂಡರೆ, ಕಿಶೋರಿಸುಧಾ ಮೊಗ್ಗು ಅರಳುವಂತೆ ಮಾತನಾಡಿ ಪರಮ ಪೂಜ್ಯ ಶ್ರೀ ಶ್ರೀಗಳ ಮತ್ತು ಅತಿಥಿಗಳ ಮನಸ್ಸನ್ನು ಮುಟ್ಟಿದಳು.

ಮಳೆಯ ನಿರಂತರ ಅಭಿಷೇಕದ ಮಧ್ಯದಲ್ಲಿಯೇ ದ್ವಿತೀಯ ಅಧಿವೇಶನ ಮುಕ್ತಾ ಯವಾಗುವ ಮೊದಲು ಶ್ರೀ ನೀಲಕಂಠಯ್ಯ ಶರಣು ಸಮರ್ಪಿಸಿದರು. ಆರಂಭದಲ್ಲಿ ಶ್ರೀ ಪರಶಿವಮೂರ್ತಿ ಸ್ವಾಗತಿಸಿದರು.

ಗ್ರಾಮದ ಸಂಘಟನೆಯ ಸಮಾರಂಭವಾಗಿ 'ಬಸವ ಜಯಂತಿ' ನಡೆದದ್ದು ಸರ್ವರ ಸಂತೋಷಕ್ಕೆ ಕಾರಣವಾಯಿತು.

ಮಳೆರಾಯ ಬಂದ ನಾಟಕ ಬೇಡವೆಂದ. ಇನ್ನೊಮ್ಮೆ ಬನ್ನಿರೆಂದ, ಅಷ್ಟೇ ಅಲ್ಲ ಮರೆಯದೆ ಬರಬೇಕೆಂದ.

ಮತ್ತೆ ಬರೆಯುತ್ತೇನೆ,

(2 ನೇ ರಕ್ಷಾ ಪುಟದಿಂದ ಮುಂದುವರೆದಿದೆ)

ಈಗಾಗಲೇ ಅನೇಕ ಮಹನೀಯರು ಉದಾರವಾಗಿ ಯೋಜನೆಗಳನ್ನು ಬೆಂಬಲಿಸಿ ದಾನ ಮಾಡಲು ಮುಂದೆ ಬಂದಿದ್ದು 115 ಕೊಠಡಿಗಳಿಗೆ ವಾಗ್ದಾನ ಮಾಡಿರುವುದಲ್ಲದೆ ಕಾಣಿಕೆಯನ್ನು ನೀಡಿರುತ್ತಾರೆ. ಪ್ರಸಾದ ನಿಲಯದ ನಿರ್ಮಾಣಕ್ಕೂ ಸಹಾಯ ಮಾಡಿರುತ್ತಾರೆ. ಈ ಸುಸಂದರ್ಭದಲ್ಲಿ ಶ್ರೀಮಠದ ಭಕ್ತಾದಿಗಳಾದ ತಮ್ಮಲ್ಲಿ ಪ್ರಾರ್ಥಿಸುವುದೇನೆಂದರೆ ತಾವು ಈ ವಜ್ರ-ಮಹೋನ್ನತ ಪುಣ್ಯ ಮಣಿಹದಲ್ಲಿ ಉದಾರವಾಗಿ ಕಾಣಿಕೆ ಅರ್ಪಿಸುವುದರ ಮೂಲಕ "ವಜ್ರ ಮಹೋತ್ಸವ" ಅಮೋಘವಾಗಿ ನಡೆಯಲು ಸಹಕಾರ ನೀಡುವಿರೆಂದು ನಂಬಿರುತ್ತೇವೆ.

ನಿಯೋಜಿತ ವಿದ್ಯಾರ್ಥಿನಿಲಯದ ಒಂದು ಕೊಠಡಿ ಕಟ್ಟಿಸಿಕೊಡುವವರ ಹೆಸರನ್ನು ಕೊಠಡಿಗೆ ಇಡಲಾಗುತ್ತೆ. ಅದಕ್ಕೆ ತಗಲುವ ಅಂದಾಜು ಮೊಬಲಗು 35,000 ರೂಗಳು ಆರು ಕೊಠಡಿಯ 'ಬ್ಲಾಕ್' ಕಟ್ಟಿಸಿಕೊಡುವವರ ಹೆಸರನ್ನು ಇಡೀ ಬ್ಲಾಕ್‌ಗೆ ಇಡಲಾಗುತ್ತದೆ.

ಪ್ರಸಾದ ನಿಲಯಕ್ಕೆ ಸಹಾಯ ಮಾಡುವವರ ಹೆಸರನ್ನು ನಿಲಯದ ಶಿಲಾ ಫಲಕದಲ್ಲಿ ಬರೆಸಲಾಗುತ್ತದೆ.

ದಯಮಾಡಿ ತಮ್ಮ ವಂತಿಕೆಯನ್ನು ಈ ಪುಣ್ಯ ಕಾರ್ಯಕ್ಕೆ ವಿನಿಯೋಗಿಸ ಬೇಕಾಗಿ ಪ್ರಾರ್ಥಿಸುತ್ತೇವೆ.

ಪರಮ ಪೂಜ್ಯ ಶ್ರೀ ಶ್ರೀಗಳವರ ಸೇವಾ ಮಣಿಹಕ್ಕೆ ನಾವೆಲ್ಲ ನೀಡ ಬಹುದಾದ ಭಕ್ತಿ ಕಾಣಿಕೆಗೆ ಇದೊಂದು ಅಪೂರ್ವ ಅವಕಾಶವಾಗಿದೆ.

**ಶರಣಾರ್ಥಿಗಳು**

ಪದ್ಮಭೂಷಣ ಡಾ|| ಎಂ.ಸಿ. ಮೋದಿಯವರು,
ಗೌರವಾಧ್ಯಕ್ಷರು.

ಶ್ರೀ ಬಿ.ಎಸ್. ಮುದ್ದಪ್ಪನವರು
ಕಾರ್ಯಾಧ್ಯಕ್ಷರು, (ನಿವೃತ್ತ)

ಶ್ರೀ ಹಸಬಿಯವರು
ಕಾರ್ಯದರ್ಶಿಗಳು.

" SIDDAGANGA " MONTHLY Reg. No. KRNO-9



ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,